CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮೇ ೫, ೨೦೦೫ (ವೈಶಾಖ ೧೫, ಶಕ ವರ್ಷ ೧೯೨೭) | ಸಂಚಿಕೆ ೧೮ |
|---|---|---|



## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಇಂಧನ ಸಚಿವಾಲಯ**

**ವಿಷಯ:** ಮೆಸರ್ಸ್ ತ್ರಿನೇತ್ರ ಎನರ್ಜಿ ಕನ್ವರ್ಷನ್ ಲಿಮಿಟೆಡ್ ಕಂಪನಿಗೆ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಮುಂಜಾನೆ ಕಿರು ಜಲ ವಿದ್ಯುತ್ ಯೋಜನಾನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಡಿಇ 125 ಎನ್‌ಸಿಇ 96, ದಿನಾಂಕ: 10.6.1997.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 50 ಎನ್‌ಸಿಇ 2001, ದಿನಾಂಕ: 22.5.2001.
3. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಂಇ 279 ಎನ್‌ಸಿಇ 2004, ದಿನಾಂಕ: 15.10.2004.
4. ಮೆಸರ್ಸ್ ತ್ರಿನೇತ್ರ ಎನರ್ಜಿ ಕನ್ವರ್ಷನ್ ಲಿಮಿಟೆಡ್ ಕಂಪನಿಯ ಪತ್ರ ದಿನಾಂಕ: 18.10.2004.
5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಮುಂಡಾಜೆ / 2004 / 2241, ದಿನಾಂಕ: 8.12.2004.

**ಪ್ರಸ್ತಾವನೆ:**

ಮೆಸರ್ಸ್ ತ್ರಿನೇತ್ರ ಎನರ್ಜಿ ಕನ್ವರ್ಷನ್ ಲಿಮಿಟೆಡ್ ಕಂಪನಿಗೆ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಚಾರ್ಮಾಡಿ ಹೊಳೆಗೆ ಅಡ್ಡಲಾಗಿ 3 ಮೆಗಾ ವ್ಯಾಟ್ ಸಾಮರ್ಥ್ಯದ ಮಂಡಾಜೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾದ ಸಾಮರ್ಥ್ಯವನ್ನು 3 ಮೆಗಾ ವ್ಯಾಟ್‌ನಿಂದ 4.5 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

3. ಸದರಿ ಕಂಪನಿಯು ಮುಂಡಾಜೆ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಅಭಿವೃದ್ಧಿ ಸಾಧಿಸಿಲ್ಲವೆಂದು ಹಾಗೂ ಸಾಧಿಸಿದ ಪ್ರಗತಿ ಸಮಾಧಾನಕರವಾಗಿಲ್ಲವೆಂದು ಯೋಜನೆಯ ಹಂಚಿಕೆಯನ್ನು ರದ್ದು ಮಾಡುವ ನಿಟ್ಟಿನಲ್ಲಿ ಕಾರಣ ಕೇಳಿ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನೋಟೀಸ್‌ನ್ನು ಜಾರಿ ಮಾಡಲಾಗಿದೆ.

4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಕಂಪನಿಯು ವಿವಿಧ ಇಲಾಖೆಗಳಿಂದ ಅನುಮೋದನೆ ಪಡೆಯುವಲ್ಲಿ ವಿಳಂಬವಾಗಿರುವುದರಿಂದ ಸಕಾಲದಲ್ಲಿ ಯೋಜನೆ ಅನುಷ್ಠಾನ ಮಾಡಲು ಸಾಧ್ಯವಾಗಿಲ್ಲವೆಂದು ಅನುಷ್ಠಾನಕ್ಕಾಗಿ ಕಾಲಾವಕಾಶ ನೀಡಬೇಕೆಂದು ಸರ್ಕಾರವನ್ನು ಕೋರಿರುತ್ತದೆ.

5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಕಂಪನಿಯ ಕೋರಿಕೆಯನ್ನು ಪುರಸ್ಕರಿಸಿ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಇನ್ನು 3 ವರ್ಷಗಳ ಕಾಲಾವಕಾಶವನ್ನು ವಿಸ್ತರಿಸಲು ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 347 ಎಸ್‌ಸಿಇ 2004, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2004**

5. ಮೇಲಿನ ಪ್ರಸ್ತಾವನೆಯನ್ನು ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಮೆಸರ್ಸ್ ತ್ರಿನೇತ್ರ ಎನರ್ಜಿ ಕನ್ವರ್ಷನ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಚಾರ್ಮಾಡಿ ಹೊಳೆಗೆ ಅಡ್ಡಲಾಗಿ ಮೇಲೆ (1) ಮತ್ತು (2)ರ ಆದೇಶದಲ್ಲಿ ಹಂಚಿಕೆ ಮಾಡಲಾದ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಮುಂಡಾಜೆ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ.

6. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 74

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** 2004ರ ಮುಂಗಾರು, ಹಂಗಾಮಿನಲ್ಲಿ ಸಿ.ಆರ್.ಎಫ್. ಯೋಜನೆಯಡಿ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ರಿಯಾಯಿತಿ ದರದಲ್ಲಿ ಬಿತ್ತನೆ ಬೀಜ ಪೂರೈಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 689 ಟಿಎನ್.ಆರ್. 2003, ದಿನಾಂಕ: 25.3.2004.
2. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 689 ಟಿಎನ್.ಆರ್. 2003, ದಿನಾಂಕ: 24.5.2004.
3. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 689 ಟಿಎನ್.ಆರ್. 2003, ದಿನಾಂಕ: 19.7.2004.
4. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 689 ಟಿಎನ್.ಆರ್. 2003, ದಿನಾಂಕ: 30.10.2004.
5. ಕೃಷಿ ಮತ್ತು ತೋಟಗಾರಿಕಾ ಇಲಾಖೆಯ ಅ.ಟಿ.ಸಂಖ್ಯೆ:ಕೃತೋಇ460ಕೃಉಇ 2004 ದಿನಾಂಕ: 19.10.2004.
6. ಬರಪರಿಹಾರ ಕಾಮಗಾರಿಗಳ ಮೇಲ್ವಿಚಾರಣೆಗಾಗಿ ರಚಿಸಿರುವ ಸಚಿವ ಸಂಪುಟದ ಉಪಸಮಿತಿಯ ನಡವಳಿ ದಿನಾಂಕ: 4.12.2004.

**ಪ್ರಸ್ತಾವನೆ:**

2004ರ ಮುಂಗಾರು ಹಂಗಾಮಿನಲ್ಲಿ ರಾಜ್ಯದ ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿರುವ 162 ತಾಲ್ಲೂಕುಗಳ ಸಣ್ಣ ಮತ್ತು ಅತೀ ಸಣ್ಣ ರೈತರುಗಳಿಗೆ ಶೇ.50ರ ರಿಯಾಯ್ತಿ ದರದಲ್ಲಿ 13 ಬೆಳೆಗಳ ಬಿತ್ತನೆ ಬೀಜಗಳನ್ನು ಸರಬರಾಜು ಮಾಡಲು ಈ ಯೋಜನೆಗೆ ಒಟ್ಟಾರೆ ರೂ.50.00 ಕೋಟಿಗಳ ಅಂದಾಜಿನ ಬೇಡಿಕೆಗಳಿಗೆ ಅಂದಾಜು ಮಾಡಲಾಗಿತ್ತು. ಹಾಗೂ ಈ ಅನುದಾನವನ್ನು ಹಂತಹಂತವಾಗಿ ಕೃಷಿ ಇಲಾಖೆಗೆ ಬಿಡುಗಡೆ ಮಾಡುವಂತೆ ದಿನಾಂಕ:18.3.04ರಂದು ನಡೆದ ಪ್ರಕೃತಿ ವಿಕೋಪ ಪರಿಹಾರ ನಿಧಿಯ ಆಡಳಿತ ಮತ್ತು ನಿರ್ವಹಣಾ ಸಮಿತಿ ಸಭೆಯಲ್ಲಿ ನಿರ್ಣಯಿಸಲಾಗಿದೆ. ಈ ಮೇರೆಗೆ ಸದರಿ ಉದ್ದೇಶಕ್ಕಾಗಿ ಮೊದಲನೆ ಕಂತಿನಲ್ಲಿ ರೂ.2.50 ಕೋಟಿ ಅನುದಾನವನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ಕೃಷಿ ಇಲಾಖೆಯ ಕೋರಿಕೆಯಂತೆ ಹಣ ಬಿಡುಗಡೆ ಮಾಡಲಾಗಿದೆ. ಎರಡನೇ ಕಂತಿನ ಹಣ ರೂ.10.00 ಕೋಟಿ ಅನುದಾನವನ್ನು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಹಾಗೂ ಮೂರನೇ ಕಂತಿನ ಮೊತ್ತ ರೂ.17.50 ಕೋಟಿಯನ್ನು ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ, 4ನೇ ಕಂತಿನ ಮೊತ್ತ ರೂ.27.50 ಕೋಟಿಯನ್ನು ಮೇಲೆ ಓದಲಾದ (4)ರಲ್ಲಿನ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುತ್ತದೆ. ಮೇಲೆ ಓದಲಾದ (6)ರಲ್ಲಿ ಬರಪರಿಹಾರ ಕಾಮಗಾರಿಗಳ ಮೇಲ್ವಿಚಾರಣೆಯನ್ನು ಸಚಿವ ಸಂಪುಟದ ಉಪಸಮಿತಿ ಸಭೆಯಲ್ಲಿ 2004ರ ಹಿಂಗಾರು ಹಂಗಾಮಿಗೆ (ರಬಿ ಬೆಳೆಗೆ) ಸಂಬಂಧಿಸಿದಂತೆ ರಿಯಾಯಿತಿ ದರದಲ್ಲಿ ಬಿತ್ತನೆ ಬೀಜವನ್ನು ವಿತರಿಸಲು ಇಲ್ಲಿಯವರೆಗೆ ರೂ.55.00 ಕೋಟಿ ಬಿಡುಗಡೆ ಮಾಡಿದ್ದು ಉಳಿದ ರೂ.7.50 ಕೋಟಿ ಬಿಡುಗಡೆ ಮಾಡಲು ನಿರ್ಣಯಿಸಿದೆ.

ಈ ಹಿನ್ನೆಲೆಯಲ್ಲಿ ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಕೃಷಿ ಮತ್ತು ತೋಟಗಾರಿಕಾ ಇಲಾಖೆಯು ಉಳಿಕೆ ಇರುವ ಹಣ ಬಿಡುಗಡೆ ಮಾಡಲು ಕೋರಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ. 689 ಟಿಎನ್ಆರ್ 2003, ಬೆಂಗಳೂರು, ದಿನಾಂಕ: 10ನೇ ಜನವರಿ 2005 (RD 36 R&I 2004)**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ 2004ರ ಮುಂಗಾರು ಹಂಗಾಮಿನಲ್ಲಿ ರಾಜ್ಯದಲ್ಲಿ ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿರುವ 162 ತಾಲ್ಲೂಕುಗಳ ಸಣ್ಣ ಮತ್ತು ಅತಿ ಸಣ್ಣ ರೈತರುಗಳಿಗೆ ಶೇಕಡಾ 50ರ ರಿಯಾಯಿತಿ ದರದಲ್ಲಿ 15 ಬೆಳೆಗಳ ಬಿತ್ತನೆ ಬೀಜಗಳನ್ನು ವಿತರಿಸಲು ರೂ.7.50ಕೋಟಿ (ಏಳೂವರೆ ಕೋಟಿ ರೂಪಾಯಿಗಳು ಮಾತ್ರ) ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಕೃಷಿ ನಿರ್ದೇಶಕರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

2. ಮೇಲೆ ಬಿಡುಗಡೆ ಮಾಡಿದ ಅನುದಾನವನ್ನು ಬಳಸುವ ಸಂದರ್ಭದಲ್ಲಿ ದಿನಾಂಕ:23.9.2003ರ ಆದೇಶದಲ್ಲಿ ನಿಗದಿಪಡಿಸಿರುವ ಷರತ್ತು ಹಾಗೂ ಮಾರ್ಗಸೂಚಿಗಳನ್ನು ಕಡ್ಡಾಯವಾಗಿ ಪಾಲಿಸುವುದು.

3. ಮೇಲೆ ಬಿಡುಗಡೆ ಮಾಡಿದ ಅನುದಾನವನ್ನು ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಇವರಿಂದ ಸ್ವೀಕೃತಿ ರಶೀತಿ ಮತ್ತು ಚಲನ್ ಮೂಲಕ ರಾಜ್ಯ ಹುಜೂರು ಖಜಾನೆಯಿಂದ ಡ್ರಾ ಮಾಡಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ವಿಧಾನಸೌಧ, ಬೆಂಗಳೂರು ಇಲ್ಲಿ ನಿರ್ವಹಿಸಲಾಗುತ್ತಿರುವ ಸಿಆರ್ಎಫ್ ಖಾತೆಗೆ ಜಮಾ ಮಾಡಿದ ನಂತರ ಕೃಷಿ ನಿರ್ದೇಶಕರಿಗೆ ಚೆಕ್ ಅಥವಾ ಡಿ.ಡಿ. ಮೂಲಕ ಕಳುಹಿಸಲಾಗುವುದು. ತದನಂತರ ಕೃಷಿ ನಿರ್ದೇಶಕರು ಯಾವ ಉದ್ದೇಶಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆಯೋ ಆ ಉದ್ದೇಶಕ್ಕಾಗಿ ಮಾತ್ರ ಸರ್ಕಾರದಿಂದ ಹೊರಡಿಸಿರುವ ಮಾರ್ಗಸೂಚಿ ಪ್ರಕಾರ ಬಳಸತಕ್ಕದ್ದು. ಈ ಅನುದಾನದಲ್ಲಿ ಸಾಧಿಸಿದ ಆರ್ಥಿಕ ಮತ್ತು ಭೌತಿಕ ಪ್ರಗತಿಯ ವರದಿಗಳನ್ನು ಹಾಗೂ ಬಳಕೆ ಪ್ರಮಾಣ ಪತ್ರಗಳನ್ನು ಕೃಷಿ ಆಯುಕ್ತರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನವನ್ನು ಲೆಕ್ಕಶೀರ್ಷಿಕೆ 2245-02-114-0-01ಕ್ಕೆ ಈ ಕೆಳಕಂಡಂತೆ ಭರಿಸಲು ಮಂಜೂರಾತಿ ನೀಡಿದೆ.

"2245-01-102-0-00 (ಕುಡಿಯುವ ನೀರು) ಈ ಲೆಕ್ಕ ಶೀರ್ಷಿಕೆಯಿಂದ ಲೆಕ್ಕಶೀರ್ಷಿಕೆ 2245-02-114-0-01 ಬಿತ್ತನೆ ಬೀಜ ರಿಯಾಯಿತಿ ಲೆಕ್ಕಶೀರ್ಷಿಕೆಗೆ ಮರುಹೊಂದಾಣಿಕೆ ಮೂಲಕ"

5. ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ/1270 ವೆಚ್ಚ-7/04 ದಿನಾಂಕ:5.1.2005 ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಎಫ್.ಡಿ.86.ಬಿ.ಆರ್.ಎಸ್.04 ದಿನಾಂಕ:1.1.05 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 75

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಎಂ. ಸುಬ್ರಮಣಿ ಅಪರ ನಿರ್ದೇಶಕರು ಮತ್ತು ಶ್ರೀ ಕೆ. ತಿಮ್ಮಪ್ಪ ಹಿರಿಯ ಭೂವಿಜ್ಞಾನಿ (ಗಣಿ) ಭೂವಿಜ್ಞಾನ ಇಲಾಖೆ ಇವರುಗಳ ವಿರುದ್ಧ ಇಲಾಖಾ ವಿಚಾರಣೆ-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ನೋಟೀಸ್ ಸಂಖ್ಯೆ:ಸಿಆಸುಇ 48 ಎಸ್‌ಇಎನ್ 2001 ದಿನಾಂಕ: 24.9.2001.
2. ಶ್ರೀ ಸುಬ್ರಮಣಿ ರವರ ದಿನಾಂಕ: 18.10.2001ರ ಲಿಖಿತ ಹೇಳಿಕೆ.
3. ಶ್ರೀ ಕೆ. ತಿಮ್ಮಪ್ಪ ರವರ ದಿನಾಂಕ: 22.10.2001ರ ಲಿಖಿತ ಹೇಳಿಕೆ.
4. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 48 ಎಸ್‌ಇಎನ್ 2001 ದಿನಾಂಕ: 6.8.2002.
5. ವಿಚಾರಣಾಧಿಕಾರಿಗಳ ದಿನಾಂಕ: 15.3.2004ರ ವಿಚಾರಣಾ ವರದಿ.
6. ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಅನಧಿಕೃತ ಟಿಪ್ಪಣಿ ಸಂಖ್ಯೆ:ಅಪಜೀ 55 ಎಫ್‌ಡಬ್ಲ್ಯೂಎಲ್ 2004 ದಿನಾಂಕ:29.7.2004.

**ಪ್ರಸ್ತಾವನೆ:**

ಶ್ರೀ ಎಂ. ಸುಬ್ರಮಣಿ ಅಪರ ನಿರ್ದೇಶಕರು, (ಅಂತರ್‌ಜಲ) ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಮತ್ತು ಶ್ರೀ ಕೆ. ತಿಮ್ಮಪ್ಪ, ಉಪ ನಿರ್ದೇಶಕರು, ಬೆಂಗಳೂರು ಉತ್ತರ, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಅವರುಗಳು ಬೆಂಗಳೂರು ದಕ್ಷಿಣ ಕಛೇರಿಯ ಹಿರಿಯ ಭೂ ವಿಜ್ಞಾನಿಗಳಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಬನ್ನೇರುಘಟ್ಟ, ರಾಷ್ಟ್ರೀಯ ಉದ್ಯಾನವನದ ಅರಣ್ಯ ಗಡಿ ಪ್ರದೇಶದಿಂದ 1 ಕಿಲೋಮೀಟರ್ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಪ್ರದೇಶಗಳಲ್ಲಿ ಗಣಿಗಾರಿಕೆಯನ್ನು ನಿಷೇಧಿಸಿದ್ದರೂ ಸಹ ಅದನ್ನು ಉಲ್ಲಂಘಿಸಿ ಆನೇಕಲ್ ತಾಲ್ಲೂಕು ರಾಗಿಹಳ್ಳಿ ಗ್ರಾಮದ ಸರ್ವೆ ನಂ:71 ರಲ್ಲಿ ಶ್ರೀ ನಾಗಪ್ಪ ಮತ್ತು ಇತರ 13 ಮಂದಿಗೆ ಕಲ್ಲು ಗಣಿ ಗುತ್ತಿಗೆಯನ್ನು ಮಂಜೂರು ಮಾಡಿ ಅಕ್ರಮವೆಸಗಿದ ಆರೋಪಕ್ಕಾಗಿ ಅವರುಗಳ ಮೇಲೆ (1)ರಲ್ಲಿ ಓದಲಾದ ದಿನಾಂಕ:24.9.2001ರ ನೋಟೀಸ್ ಜಾರಿ ಮಾಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸ್‌ಗೆ ಶ್ರೀ ಎಂ. ಸುಬ್ರಮಣಿ, ಅಪರ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ದಿನಾಂಕ: 18.10.2001ರ ಉತ್ತರ ಹಾಗೂ ಶ್ರೀ ಕೆ. ತಿಮ್ಮಪ್ಪ ಅವರು ಮೇಲೆ (3) ರಲ್ಲಿ ಓದಲಾದ ದಿನಾಂಕ:22.10.2001ರ ಪ್ರತಿವಾದದ ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಮೇಲೆ (4) ರಲ್ಲಿ ಓದಲಾದ ದಿನಾಂಕ: 6.8.2002 ಸರ್ಕಾರಿ ಆದೇಶದಲ್ಲಿ ನಿವೃತ್ತ ನ್ಯಾಯಾಧೀಶರಾದ ಶ್ರೀ ಬಿ. ರಂಗಸ್ವಾಮಿರವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಯಿತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (5)ರಲ್ಲಿ ಓದಲಾದ ದಿನಾಂಕ: 15.3.2004ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಯವರು ತಮ್ಮ ವಿಚಾರಣಾ ವರದಿಯಲ್ಲಿ ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ ಒಂದು ಕಿ.ಮೀ. ಸುತ್ತಳತೆಯ ಪ್ರದೇಶವನ್ನು ವನ್ಯಜೀವಿ ಮತ್ತು ಪರಿಸರ ಸುರಕ್ಷಿತ ಗಡಿಯೆಂದು ಸರ್ಕಾರ ಘೋಷಿಸಿದ್ದರೂ, ಗಡಿ ಪ್ರದೇಶ ಯಾವುದು? ಎಂಬ ಬಗ್ಗೆ ನಿಖರವಾದ ಹಾಗೂ ಖಾತ್ರಿಯಾದ ಸಾಕ್ಷಿ ಪುರಾವೆಗಳನ್ನು ವಿಚಾರಣಾಧಿಕಾರದ ಮುಂದೆ ಮಂಡಿಸಲು ಶಿಸ್ತು ಪ್ರಾಧಿಕಾರ ವಿಫಲಗೊಂಡಿದೆ ಎಂದು ತಿಳಿಸಿ ನಕಾರಾತ್ಮಕವೆಂದು ನಿರ್ಣಯಿಸಲಾಗಿದೆ ಎಂದು ತಿಳಿಸಿದ್ದಾರೆ.

ಪ್ರಸ್ತುತ ಪ್ರಕರಣಗಳಲ್ಲಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಮೇಲೆ (6)ರಲ್ಲಿ ಓದಲಾದ ದಿನಾಂಕ: 29.7.2004ರ ಅನಧಿಕೃತ ಟಿಪ್ಪಣಿಯಲ್ಲಿ ಗಣಿಗಾರಿಕೆಗೆ ಅನುಮತಿ ನೀಡುವ ಕುರಿತಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಅಧಿಕಾರಿಗಳ ತಪ್ಪು ಇರುವುದಿಲ್ಲವೆಂದು ಬನ್ನೇರುಘಟ್ಟ ಉದ್ಯಾನವನದ ಸಹಾಯಕ ಸಂರಕ್ಷಣಾಧಿಕಾರಿಯವರ ತಪ್ಪು ವರದಿಯ ಆಧಾರದ ಮೇಲೆ ನೀಡಿರುವುದರಿಂದ ಆಪಾದಿತರಿಗೆ ಸಂದೇಹದ ಲಾಭವನ್ನು ನೀಡಬೇಕಾಗುತ್ತದೆಂದು ಅಭಿಪ್ರಾಯಪಟ್ಟಿದೆ. ಅದರಂತೆ ಸರಕಾರವು ಇಲಾಖಾ ವಿಚಾರಣೆಯಲ್ಲಿ ಒಳಗೊಂಡಿರುವ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಅಧಿಕಾರಿಗಳಾದ ಶ್ರೀ ಸುಬ್ರಮಣ್ಯ ಅಪರ ನಿರ್ದೇಶಕರು ಹಾಗೂ ಶ್ರೀ ತಿಮ್ಮಪ್ಪ ಹಿರಿಯ ಭೂವಿಜ್ಞಾನಿ (ಗಣಿ) ಇವರುಗಳ ವಿರುದ್ಧ ಮಾಡಲಾದ ಆರೋಪ ಸಂಬಂಧ ವಿಚಾರಣಾ ವರದಿಯನ್ನು ಮತ್ತು ಪರಿಸರ ಇಲಾಖೆಯ ವರದಿಯೊಂದಿಗೆ ಪರಿಶೀಲಿಸಿ ವಿಚಾರಣಾ ವರದಿಯನ್ನು ಒಪ್ಪಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 48 ಎಸ್‌ಇಎನ್ 2001, ಬೆಂಗಳೂರು, ದಿನಾಂಕ: 5ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀ ಸುಬ್ರಮಣಿ ಅಪರ ನಿರ್ದೇಶಕರು (ಅಂತರ್ಜಲ) ಗಣಿ ಮತ್ತು ಭೂವಿಜ್ಞಾನ ಇಲಾಖೆ ಮತ್ತು ಶ್ರೀ ಕೆ. ತಿಮ್ಮಪ್ಪ ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರುಗಳ ವಿರುದ್ಧ ಮಾಡಲಾದ ದೋಷಾರೋಪಣೆಗಳಿಂದ ಸದರಿಯವರನ್ನು ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶಿಸಿದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ಸುಬ್ರಮಣಿ ಮತ್ತು ಶ್ರೀ ಕೆ. ತಿಮ್ಮಪ್ಪರವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅಂತಹ ಎಲ್ಲ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 76

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

**REVENUE SECRETARIAT**

**Sub:** Appeal Petition of Sri Nagarajappa Honnal, Tahsildar against the penalty imposed on him.

**Read:**
1. Govt.Order No.RD 74 ADE 2001, dated:12.02.2002.
2. Appeal Petition dated:10.5.2002 of Sri Nagarajappa Honnal, Tahsildar, submitted before His Excellency, The Governor of Karnataka.

**Preamble:-**

A Departmental Enquiry was ordered against the Appellant Sri Nagarajappa Honnal, Tahsildar, while he was working as Tahsildar, Kadur Taluk, Chickamagalur District during the year 1994-95 on the proposal of the Deputy Commissioner, Chickamagalur, for having issued 105 permits to private

individuals for distributing 127 quintals of sugar against the rules and guidelines stipulated in this regard. It was also alleged that 24.50 quintals of sugar was delivered to 13 fair price shops over and above the prescribed limit, facilitating these fair price shops owners to misuse it and the same could not be distributed to the cardholders as per the prescribed quota. Hence he had exceeded his powers and committed grave misconduct in depriving the benefit meant for the public under the Public Distribution System - a scheme of the Government.

Since the charges were proved in the departmental enquiry conducted against the appellant, a penalty of reduction of the pay by five stages for a period of 5 years was imposed on him as per Government Order dated:12.2.2002 read at (1) above. Being aggrieved by the order of penalty, the Appellant submitted an appeal petition dated 10.5.2002 before His Excellency, the Governor of Karnataka, read at (2) above under rule 18 of the Karnataka Civil Services (CCA) rules 1957. Accordingly the connected records along with parawise remarks to the appeal petition were made available to the Governor's Secretariat. On perusal of the said records and parawise remarks His Excellency, the Governor of Karnataka made the following order.

**Government Order No:RD 74 ADE 2000, Bangalore, Dated: 7th January 2005**

The appeal petition dated: 10.5.2002 submitted by Sri Nagarajappa Honnal, Tahsildar to His Excellency, the Governor of Karnataka under rule 18 of the Karnataka Civil Services (Classification, Control, and Appeal) Rules, 1957 was examined with connected records and His Excellency, the Governor of Karnataka made the following order under Rule 25 of Karnataka Civil Services (Classification, Control, and Appeal) Rules 1957.

"I have perused the appeal petition of Sri Nagarajappa Honnal, Tahsildar, against the Government Order No. RD 74 ADE 2000 dated 12th February 2002, imposing upon him the penalty of reduction of pay by five stages for a period of five years during which period he would not earn increment. I have gone through the concerned appeal records and the Inquiry records. The charge on the appellant is that during the period from January 1994 to July 1994 he issued special permits and released 127.06 quintals of sugar to certain institutions and individuals, including the release of 24.5 quintals of excess sugar to certain fair price shops. However no malafides have been attributed in such release through special permits, though it is stated that the Tahsildar was not authorized to issue such special permits. One of the contentions of the appellant is that it was in practice to issue special permits on special occasions and his action was as per the practice in force. It is also his contention that the very officers who deposed against him had also committed the same mistake of issuing special permits as per the register maintained and also that whenever his office was inspected this was not pointed out. The 3rd witness Sri G.R. Kumar, Food Inspector has deposed to the extent that special permits were being issued on special occasions even earlier and it was a practice to issue special permits and the DGO had done the same and that since these special permits would be issued against the unutilized quota of levy sugar allotted for distribution to card holders, the genuine card holders would not be affected. These aspects have not been controverted both in the Inquiry report and in the comments to the appeal. It is found that no malafides have been attributed in the charge with regard to the issue of special permits. However, as the action by the appellant is without proper authority the appeal is allowed only partially. The order of the disciplinary authority is set aside. The appellant has erred in going beyond his authority and cannot seek refuge in going by 'per practice'. Hence to that extent he is at fault. The Government should look for the improvement of the system laying some conditions as to how and when special permits may be issued. **The ends of justice would meet if the appellant is imposed with a penalty of reduction in pay by five stages for a period of two years instead of five years and during this period the appellant would not earn increments.** I therefore modify the penalty imposed in the Government Order No. RD 74 ADE 2000 dated 12th February, 2002 accordingly.

**T.N. CHATURVEDI**
Governor of Karnataka

In the above circumstances, the earlier Government Order No. RD 74 ADE 2000, dated: 12.2.2002 stands modified to the extent as ordered above.

By Order and in the name of the Governor of Karnataka,
**M.S. MAHANTHESHAIAH**
Under Secretary to Government,
Revenue Department (Services-3)

P.R. 77

## ಇಂಧನ ಸಚಿವಾಲಯ

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : KRED / 08 / FIZA / 2004 / 1639, ದಿನಾಂಕ: 1.9.2004.

2. ದಿನಾಂಕ: 4.12.2004 ರಂದು ನಡೆದ ಹಂಚಿಕೆ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ Fiza Developers & Inter Trade Private Limited, ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಹೊಗೆರಹಳ್ಳಿ ಮತ್ತು ಯದಹನಕಲ್ಲು ಗ್ರಾಮದಲ್ಲಿ 15 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲಿನ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 4.12.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯು ಅನುಮೋದಿಸಿರುತ್ತದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 319 ಎನ್‌ಸಿಇ 2004, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ Fiza Developers & Inter Trade Private Limited, ಕಂಪನಿಗೆ, ಚಿಕ್ಕಮಗಳೂರು ಜಿಲ್ಲೆಯ ಹೊಗೆರಹಳ್ಳಿ ಮತ್ತು ಯದಹನಕಲ್ಲು ಗ್ರಾಮದಲ್ಲಿ 15 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿದಂತೆ ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

| Sl. No. | Installable potential in M.W. | Area Details |
|---|---|---|
| 1. | 9 M.W. | Ridge oriented in N-E-S-W direction identified as "A" is located on the S-E of Hogarehalli and is in the region of Yemmedoddi State Forest. As per the topo map the area is described as open jungle. This ridge is having peaks 1562, 1440, 1215, and 1240 Amsl. |
| 2. | 6 M.W. | Non-district ridge oriented in N-S directions are identified as "B" & "C", Ridge B is located on South of Yeradahankallu village with peak 1186 m and Ridge C is located on West of Masalapur with peak 1312 m Amsl.<br>The geographical co-ordinates of these 3 ridges "A", "B" & "C" are as given below.<br>Latitude : 13 30'-13 35'<br>Longitude : 75 51'31" - 75 55'50"E<br>Elevations : 1312, 1562, 1186, 1440, 1215, 1243 and 124om Amsl. |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾವ್ಯಾಟ್ ಒಂದಕ್ಕೆ ರೂ.25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ಆಗಿ ನಕ್ಷೆ ಮತ್ತು ವಿಂಡ್ ಫಾರ್ಮ್‌ನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುಚ್ಛಕ್ತಿ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| > 200 ಕಿಲೋ ವ್ಯಾಟ್‌ನಿಂದ 300 ಕಿಲೋವ್ಯಾಟ್ | 18 | 1 |
| > 300 ಕಿಲೋ ವ್ಯಾಟ್‌ನಿಂದ 500 ಕಿ.ವ್ಯಾ | 15 | 1 |
| > 500 ಕಿಲೋ ವ್ಯಾಟ್‌ನಿಂದ 750 ಕಿ.ವ್ಯಾ | 12 | 1 |
| > 750 ಕಿಲೋ ವ್ಯಾಟ್‌ನಿಂದ 1000 ಕಿ.ವ್ಯಾ | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ದ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ / ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 78

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಬಿ.ಜಿ. ಮಾಳಿಗೇರ್, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 85 ಎಸ್‌ಇಎನ್ 98 ದಿನಾಂಕ: 2.3.2001.
2. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 85 ಎಸ್‌ಇಎನ್ 98 ದಿನಾಂಕ: 3.8.2002.

**ಪ್ರಸ್ತಾವನೆ:**

ಶ್ರೀ ಬಿ.ಜಿ. ಮಾಳಿಗೇರ್, ನಿವೃತ್ತ ಮುಖ್ಯ ಇಂಜಿನಿಯರ್ ರವರು ಧಾರವಾಡದಲ್ಲಿರುವ ಜಲ ಮತ್ತು ನೆಲ ನಿರ್ವಹಣಾ ಸಂಸ್ಥೆಯ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಆಡಳಿತ ಮಂಡಳಿಯ ಅನುಮೋದನೆ ಪಡೆಯದೇ ವಾಲ್ಮಿ ಸಂಸ್ಥೆಯ ಹೆಸರನ್ನು ಬದಲಾಯಿಸಿ ನಾಮಫಲಕ, ಲೆಟರ್ ಪ್ಯಾಡ್, ಪ್ರಿಂಟಿಂಗ್ ಬಗ್ಗೆ ರೂ.12,73,702/- ಅನಗತ್ಯ ವೆಚ್ಚ, ಕಾನೂನು ಬಾಹಿರವಾಗಿ ಗ್ರೂಪ್ 'ಸಿ' ಮತ್ತು 'ಡಿ' ಹುದ್ದೆಗಳಿಗೆ ಗುತ್ತಿಗೆ ಆಧಾರದ ನೇಮಕಾತಿ, ಆಡಳಿತ ಮಂಡಳಿ ಅನುಮೋದನೆ ಪಡೆಯದೆ ರೂ.1,05,64,989/- ಸಾಮಗ್ರಿಗಳನ್ನು ಅನಗತ್ಯವಾಗಿ ಖರೀದಿಸಿರುವುದು ಹಾಗೂ ಗ್ರೂಪ್ ಎ,ಬಿ,ಸಿ,ಡಿ, ಹುದ್ದೆಗಳ ನೇಮಕಾತಿಗೆ ಪತ್ರಿಕೆಗಳಲ್ಲಿ ಜಾಹಿರಾತು ಬಾಬ್ತು ರೂ.8,72,148/- ಅನಗತ್ಯ ವೆಚ್ಚ, ಸರ್ಕಾರದ ಸೂಚನೆ ಮೀರಿ ರಾಜ್ಯದಿಂದ ಹೊರಗೆ ವಿಮಾನಯಾನ ರೂ.80,423/- ವೆಚ್ಚ ಮಾಡಿದ ಆರೋಪಗಳಿಗಾಗಿ ಶ್ರೀ ಬಿ.ಜಿ. ಮಾಳಿಗೇರ್, ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ:2.3.2001ರ ಸರ್ಕಾರಿ ಆದೇಶದಲ್ಲಿ ಶ್ರೀ ವಿ.ಹೆಚ್. ಉಪಾಧ್ಯಾಯ ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ಹಾಗೂ ಮೇಲೆ(2) ರಲ್ಲಿ ಓದಲಾದ ದಿನಾಂಕ:3.8.2002ರ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್.ಟಿ. ಪಾಟೀಲ್ ಪ್ರಾಧ್ಯಾಪಕರು, ಸಮಾಜಶಾಸ್ತ್ರ ವಿಭಾಗ ಹಾಗೂ ಮುಖ್ಯಸ್ಥರು ಪಿ.ಐ.ಎಂ. ಘಟಕ ವಾಲ್ಮಿ ಧಾರವಾಡ ಇವರನ್ನು ಮಂಡನಾಧಿಕಾರಿಗಳಾಗಿ ನೇಮಿಸಲಾಗಿತ್ತು. ಆದರೆ ಶ್ರೀ ವಿ.ಹೆಚ್. ಉಪಾಧ್ಯಾಯ, ನಿವೃತ್ತ ನ್ಯಾಯಾಧೀಶರು ತಮ್ಮ ಅನಾರೋಗ್ಯ ನಿಮಿತ್ತ ವಿಚಾರಣೆ ಮುಂದುವರಿಸಲು ಸಾಧ್ಯವಿಲ್ಲವೆಂದು ದಿನಾಂಕವಿಲ್ಲದ ಅವರ ಪತ್ರದಲ್ಲಿ ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಸಿಆಸುಇ 85 ಎಸ್‌ಇಎನ್ 98, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಹಾಗೂ ಕೆ.ಸಿ.ಎಸ್.ಆರ್.214 ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಆದೇಶ ದಿನಾಂಕ: 2.3.2001 ರಲ್ಲಿ ಶ್ರೀ ವಿ.ಹೆಚ್. ಉಪಾಧ್ಯಾಯ ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯಾಗಿ ನೇಮಿಸಿದ್ದ ಆದೇಶವನ್ನು ಈ ಮೂಲಕ ರದ್ದುಗೊಳಿಸುತ್ತಾ ಅವರ ಬದಲಿಗೆ ಶ್ರೀ ವಿ.ಎಸ್. ಆರಟ್ಟಿ, ನಿವೃತ್ತ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 03 ಸೇಇವಿ 96 ದಿನಾಂಕ: 24.4.1998 ರಂತೆ ರೂ.5000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ: 4.3.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಮಂಡನಾಧಿಕಾರಿಯಾಗಿದ್ದ ಶ್ರೀ ಎಸ್.ಟಿ. ಪಾಟೀಲ್, ಪ್ರಾಧ್ಯಾಪಕರು, ಸಮಾಜಶಾಸ್ತ್ರ ವಿಭಾಗ ಹಾಗೂ ನಿರ್ದೇಶಕರು ಪಿ.ಐ.ಎಂ.ಘಟಕ ವಾಲ್ಮಿ ಧಾರವಾಡರವರನ್ನೆ ಮಂಡನಾಧಿಕಾರಿಯನ್ನಾಗಿ ಮುಂದುವರಿಸುತ್ತದೆ ಹಾಗೂ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಮಂಡನಾಧಿಕಾರಿಯು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 79

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಸಿಆಸುಇ (ಸೇವೆಗಳು-3)

## HOME AND TRANSPORT SECRETARIAT

**Sub:** Release of amount sanctioned by te Government of India for the year 2002-03 in respect of Prison Modernisation reg.

**Read:**
1. Government Order No.HD 214 PRA 2002 dated:14.10.2003.
2. Government Order No.HD 214 PRA 2002 dated:19.11.2003.
3. Government of India sanction order No.V-11018/9/2002-PR. dated: 10.3.2004.
4. Government Order No.HD 214 PRA 2002 dated:29.3.2004.
5. Government Order No.HD 214 PRA 2002 dated:8.7.2004.

6. Letter No.ADM.1 MODN CR-20 2000-01 dated 14.9.2004 of The Director General of Police and Inspector General of Prisons, Bangalore.
7. Government of India Sanction Order No.V-11018/9/2002-PR Dated 15.9.2004.

**Preamble:-**

In Government Order dated:14.10.2003 read at Sl.No.(1) above sanction was accorded for release of an amount of Rs.808.50 lakhs sanctioned by Government of India for 2002-03 in respect of Prison Modernisation. Sanction was also accorded for utilizing the unspent amount of Rs.169.00 lakhs, sanctioned during 2002-03 as State share. Further sanction was also accorded for utilizing the total amount of Rs.977.50 lakhs during 2003-2004 respectively.

In Government Order dated 19.11.2003 read at Sl.No.(2) above, sanction was accorded for release of an amount of Rs.2.69 crore for the current year 2003-04 as 25% State share and as matching grant in respect of Prison Modernisation Scheme under the Perspective Plan.

In the Government of India Order dated: 10.3.2004 read at Sl.No. (3) above sanction was accorded for release of Rs.8,00,92,500/- to the State Government account.

In G.O. dated 29.3.2004 read at Sl.No.(4) above sanction was accorded for release of an amount of Rs.100.00 lakhs through contingency fund for the current year 2003-04 as 25% State share as matching grant in respect of Prison Modernisation Scheme under the perspective plan.

In G.O. dated 8.7.2004 read at Sl.No.(5) above sanction was accorded for release of an amount of Rs.800.93 lakhs (Rupees Eight Crores and ninety three thousand only) under the scheme of Prison Modernisation towards 75% of Central Share for the year 2003-04 and Rs.200.21 (Rupees Two crores and twenty one lakhs only) being 25% of State share as matching grants, totally Rs.1001.14 lakhs (Rupees Ten crores one lakhs and fourteen thousand only).

In letter dated 14.9.2004 read at Sl.No.(6) above. The Director General of Police and Inspector General of Prisons, Bangalore has stated that the Government of India, Ministry of Home Affairs, New Delhi have accorded sanction to release Central Share of Rs.400462 crore to Karnataka State under the scheme of Modernisation of Prison Administration towards 75% Central share during the current years perspective plan 2004-05. The above amount alongwith 25% State share of Rs.2,6697 crore for 2004-05 has to be drawn and spent immediately. Hence, he has requested the Government to release for an amount of Rs.6,67432 crore (Rs.4,00462 crore-Rs.2,6697 crore) and also requested to issue Government Order authorizing the Director General of Police and Inspector General Prison, Bangalore to drawn the amount on "Grant in Aid" bill from the State Huzur Treasury, Bangalore.

In Government of India order dated 15.9.2004 read at (7) above, sanction was accorded for release of Rs.4,00,46,200-00 to the State Government account.

The above proposal has been examined by the Government and following orders are issued.

**Government Order No. HD 214 PRA 2002, Bangalore, Dated: 3rd January 2005**

In the circumstances, mentioned in the preamble portion to this order, sanction is hereby accorded for release of an amount of Rs.400.46 lakhs (Rupees Four crores and forty six lakhs only) under the scheme of Prison Modernisation towards 75% of Central's share for the year 2004-05 and Rs.100.11 lakhs (Rupees One Crore and Eleven lakhs only) being 25% of State Share as matching grants totally Rs.500.57 lakhs (Rupees Five Crores and fiftyseven lakhs only).

The above expenditure shall be met under the head of account "2056-00-800-0-01-125 as an additional grant.

Suitable action may be taken at the appropriate time to incorporate the additional grants in the prescribed form in the supplementary estimates.

The Director General of Police and Inspector General of Prisons, Bangalore is authorized to draw the amount in "Grant-in-Aid" Bill.

This order is issued with the concurrence of Finance Department vide its note No. FD 1745 Ex-6/2004 dated 29.12.2004.

By Order and in the name of the Governor of Karnataka,

**A.S. KANTARAJU**

Under Secretary to Government,

Home and Transport Department (Prisons and Cinema)

P.R. 80

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವೈಜನಾಥ, ಮಾಜಿ ಸಿಪಿಸಿ 821 ಬೀದರ್ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಪೊಲೀಸ್ ಅಧೀಕ್ಷಕರು, ಬೀದರ್ ಇವರ ಆದೇಶ ಸಂಖ್ಯೆ: ಡಿ೪:ಬಿ 73:1994-2001:4919:2 ದಿನಾಂಕ: 9.2.2001.
2. ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ ಗುಲ್ಬರ್ಗಾ ಇವರ ಆದೇಶ ಸಂ ಅಪೀಲು:33:ಈವ:2001: ದಿ:17.8.2001.
3. ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ದಿನಾಂಕ: 16.12.2001 ಮತ್ತು 16.7.2002.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಇವರ ಪತ್ರ ಸಂ. ಅಪೀಲು:6:57:2001-02 ದಿನಾಂಕ:4.6.2002.
5. ಆರಕ್ಷಕ ಅಧೀಕ್ಷಕರು, ಬೀದರ್ ಇವರ ಪತ್ರ ಸಂ. 10:ಪ್ರ.ಮೇಲ್ಮನವಿ:02 ದಿನಾಂಕ:16.12.2004.

**ಪ್ರಸ್ತಾವನೆ:**

ಶ್ರೀ ವೈಜನಾಥ್, ಮಾಜಿ ಸಿಪಿಸಿ 821 ಬೀದರ್ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ಧ ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"1. ದಿನಾಂಕ: 19.8.1986 ರಿಂದ 13.11.1988ರ ವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ಅತೀವ ನಿಷ್ಕಾಳಿಜಿತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುವುದು.

2. ಅತೀವ ದುರ್ನಡತೆಯಿಂದ ಹೊರದೇಶ ಕುವೈತ್‌ಗೆ ದಿನಾಂಕ:22.8.1986 ರಿಂದ 24.8.87ರ ವರೆಗೆ ಯಾವುದೇ ರೀತಿಯ ಮೇಲಾಧಿಕಾರಿಯವರ ಪರವಾನಗಿ ಇಲ್ಲದೆ ಹೋಗಿ, ಇಲಾಖೆ ಅಳವಡಿಸ ಕಾಯ್ದೆ ಉಲ್ಲಂಘನೆ ಮಾಡಿದ್ದು.

3. ಕುವೈತ್‌ನಲ್ಲಿ, ಆಪಾದಿತ ಪೊಲೀಸ್ ಅಧಿಕಾರಿ ಇದ್ದಾಗ ಇಲಾಖೆ ಅಳವಡಿಸಿದ ನಿಯಮಗಳ ಉಲ್ಲಂಘನೆ ಮಾಡಿ ಕೆ.ಎಂ.ಎಫ್.ಸಿ. ಕಂಪನಿಯಲ್ಲಿ ಖಾಸ ಕೆಲಸಕ್ಕೆ ಸೇರಿಕೊಂಡು ಕೆಸಿಎಸ್‌ಆರ್ (ಸಿಸಿಎ) ರೂಲ್ಸ್ ರ ಪ್ರಕಾರ ದಾಖಲಾತಿ ಪುರಾವೆಯಲ್ಲಿ ತಪ್ಪು ಮಾಡಿದ್ದು"

ಮೇಲ್ಕಂಡ 3 ಆರೋಪಗಳಲ್ಲಿ 1ನೇ ಆರೋಪವು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆಯೆಂಬ ಇಲಾಖಾ ವಿಚಾರಣಾ ವರದಿಯ ಆಧಾರದ ಮೇಲೆ, ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿಯವರು ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ವೈಜನಾಥ ಸಿಪಿಸಿ 821 ಸದ್ಯ ಭೀಮಲಖೇಡಾ ಪೊಲೀಸ್ ಠಾಣೆ ಇವರನ್ನು ಈ ಕೂಡಲೇ ಸೇವೆಯಿಂದ ತೆಗೆದುಹಾಕಲಾಗಿದೆ ಮತ್ತು ಇವರ ಗೈರುಹಾಜರಿ ಅವಧಿಯನ್ನು ಸಂಬಳರಹಿತ ರಜೆಯೆಂದು ಮತ್ತು ಅಮಾನತ್ತಿನ ಅವಧಿಯನ್ನು ಅಮಾನತ್ತಿನ ಅವಧಿಯೆಂದೇ ದಂಡನೆ ವಿಧಿಸಿರುತ್ತದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲೆ (3) ರಲ್ಲಿ ಓದಲಾದ ಪತ್ರಗಳಲ್ಲಿ ಪರಿಷ್ಕರಣೆ ಮೇಲ್ಮನವಿಗಳನ್ನು ಸಲ್ಲಿಸಿದ್ದು, ಅದರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

"1. ತಾನು ಪರಿಶಿಷ್ಟ ಜಾತಿಗೆ ಸೇರಿದ್ದು 18 ವರ್ಷಗಳು ಸೇವೆ ಸಲ್ಲಿಸಿದ್ದು ತನ್ನ ಮನವಿಯನ್ನು ಪರಿಗಣಿಸಬೇಕು.

2. ತನ್ನ ಆರೋಗ್ಯ ಸರಿ ಇಲ್ಲದೇ ಇದ್ದು ಭಾಲ್ಕಿಯ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದಿದ್ದು ನಂತರ 1986ರಲ್ಲಿ ಕೆಲಸಕ್ಕೆ ರಾಜೀನಾಮೆ ನೀಡಿ 1987ರಲ್ಲಿ ವಾಪಸ್ ಪಡೆದಿರುತ್ತೇನೆ. 31.12.87ರ ವರೆಗೆ ತಮ್ಮ ರಾಜೀನಾಮೆ ಏಕೆ ಅಂಗೀಕರವಾಗಲಿಲ್ಲ ಅನ್ನುವುದು ಪರಿಶೀಲಿಸಬೇಕಾಗಿದೆ ತಾನು ರಾಜೀನಾಮೆ ಕೊಟ್ಟರೂ ತನ್ನನ್ನು ಪುನಃ ಕೆಲಸಕ್ಕೆ ನೇಮಿಸಿಕೊಳ್ಳಲಾಗಿದೆ.

3. ಜಂಟೀ ಇಲಾಖಾ ವಿಚಾರಣೆಯನ್ನು ನಡೆಸಿದ್ದು ತನ್ನ ತಂದೆಯವರು ಪಿಎಸ್‌ಐ ಆಗಿದ್ದು ಅವರ ವಿರುದ್ಧ ವಿನಾ ಕಾರಣ ತನ್ನ ವೇತನವನ್ನು ತೆಗೆದುಕೊಂಡಿದ್ದಾರೆ ಎಂದು ಆರೋಪ ಹೊರಿಸಿದ್ದು ಅವರು ದೋಷಮುಕ್ತರಾಗಿರುತ್ತಾರೆ. ತಮ್ಮ ವಿರುದ್ಧ 3 ಆರೋಪಗಳು ಸಾಬೀತಾಗಿದೆಯೆಂದು ಶಿಸ್ತು ಪ್ರಾಧಿಕಾರ ಸೇವೆಯಿಂದ ವಜಾ ಮಾಡುವ ಶಿಕ್ಷೆ ವಿಧಿಸಿರುತ್ತಾರೆ. ಆದರೆ ಒಂದು ಆರೋಪ ಮಾತ್ರ ಸಾಬೀತಾಗಿರುತ್ತದೆ. ಇದನ್ನು ಮನಗಂಡು ತನ್ನನ್ನು ಸೇವೆಯಲ್ಲಿ ಪುನರ್ ಸ್ಥಾಪಿಸಿ ಡಿಜಿ ಮತ್ತು ಐಜಿಪಿ ರವರು ಪುನಃ ಎಲ್ಲಾ 3 ಆರೋಪಗಳ ಬಗ್ಗೆ ಮರು ವಿಚಾರಣೆ ನಡೆಸಲು ಆದೇಶಿಸಿರುತ್ತಾರೆ.

4. ಪೂರ್ವ ಭಾವಿ ವಿಚಾರಣೆನಡೆಸಿದ ಡಿವೈಎಸ್‌ಪಿ ರವರನ್ನು ಇಲಾಖಾ ವಿಚಾರಣೆಯಲ್ಲಿ ಪರೀಕ್ಷಿಸಿಲ್ಲ ಅಭಿಯೋಗ ಸಾಕ್ಷಿ 7 ರವರನ್ನು ಪೊಲೀಸ್ ಸ್ನೇಹಿತರ ಗೈರುಹಾಜರಿಯಲ್ಲಿ ವಿಚಾರಿಸಲಾಗಿದೆ. ಅಭಿಯೋಗ ಸಾಕ್ಷಿ 6 ತಮ್ಮ ತಂದೆಯಾಗಿದ್ದು ಅವರ ಹೇಳಿಕೆ ಪಡೆದಿಲ್ಲ.

5. ತಾನು ಹೊರದೇಶಕ್ಕೆ ಹೋದ ಬಗ್ಗೆ ಪುರಾವೆಗಳಿಲ್ಲ ಕುವೈತ್‌ನಲ್ಲಿ ಕೆಎಂಪಿಸಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸಿದ್ದಕ್ಕೆ ಯಾವುದೇ ಸಾಕ್ಷ್ಯಾಧಾರಗಳಿಲ್ಲ.

ಅರ್ಜಿದಾರರು ಮಂಡಿಸಿರುವ ವಾದ ಹಾಗೂ ವಿಚಾರಣೆ ವರದಿ ಮತ್ತು ಇತರ ದಾಖಲೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಅರ್ಜಿದಾರರು ಸರ್ಕಾರದ ಪೂರ್ವಾನುಮತಿ ಇಲ್ಲದೇ ಹೊರದೇಶಕ್ಕೆ ತೆರಳಿರುವುದು, ಅದರ ಬೇಜವಾಬ್ದಾರಿತನ ತೋರಿಸುತ್ತದೆ ಹಾಗೂ ತಮ್ಮ ಕರ್ತವ್ಯದಲ್ಲಿ ತೀವ್ರ ಲೋಪ ಎಸಗಿದ್ದು ದಿನಾಂಕ: 19.8.86 ರಿಂದ 13.11.88ರ ವರೆಗಿನ ತಮ್ಮ ಗೈರುಹಾಜರಾತಿ ಅವಧಿಯಲ್ಲಿ, ವಿದೇಶದಲ್ಲಿ ಖಾಸಗಿ ಕಂಪನಿಯೊಂದರಲ್ಲಿ ಕೆಲಸ ಮಾಡಿರುವುದಾಗಿ ಪೂರ್ವಾಭಾವಿ ವಿಚಾರಣೆ ವೇಳೆಯಲ್ಲಿ ಅವರೇ ಒಪ್ಪಿಕೊಂಡಿದ್ದು, ತಮ್ಮ ತಂದೆಗೆ ವಿದೇಶದಿಂದ ಬರೆದ ಕೆಲವು ಪತ್ರಗಳ ಜೆರಾಕ್ಸ್ ಪ್ರತಿಗಳ ಆಧಾರದ ಮೇಲೆ, ಇವರ ಮೇಲಿನ ಆರೋಪಗಳೂ ಸಾಬೀತಾಗಿರುತ್ತದೆ. ಅಲ್ಲದೆ ಅರ್ಜಿದಾರರು ಶಿಸ್ತು ಇಲಾಖೆಯ ನೌಕರರಾಗಿದ್ದು ಇವರ ಈ ರೀತಿಯ ನಡತೆ ತೀವ್ರಲೋಪ ಆಗಿದ್ದು ಮತ್ತು ಕಾನೂನುಬಾಹಿರವಾಗಿರುತ್ತದೆ. ಈ ಹಿನ್ನೆಲೆಯಲ್ಲಿ, ಅರ್ಜಿದಾರರ ಲೋಪಗಳನ್ನು ಮನ್ನಾ ಮಾಡಿ, ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಲು ಅಥವಾ ಮಾರ್ಪಾಡಿಸಲು ಯಾವುದೇ ಸಮರ್ಥನೆ ಇಲ್ಲವೆಂದು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 11 ಪೊಸಿಅ 2002, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಗಳು 1965 ರಡಿ, ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೈಜನಾಥ ಮಾಜಿ ಸಿಪಿಸಿ 821, ಬೀದರ್ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 81

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಇಂಧನ ಸಚಿವಾಲಯ**

**ವಿಷಯ:** ಮೆಸರ್ಸ್ ಭಾವನ ಹೈಡ್ರೋ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 800 ಕಿಲೊ ವ್ಯಾಟ್ ಸಾಮರ್ಥ್ಯದ ಗಂಗನದಾಳ ಕಿರು ಜಲ ವಿದ್ಯುತ್ ಯೋಜನೆನಾ ಸಾಮರ್ಥ್ಯವನ್ನು 1.25 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 298 ಎನ್‌ಸಿಇ 2004, ದಿನಾಂಕ: 13.9.2004.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಗಂಗನದಾಳ / 2004 / 1916, ದಿನಾಂಕ: 26.10.2004.

**ಪ್ರಸ್ತಾವನೆ:**

ಮೆಸರ್ಸ್ ಭಾವನ ಹೈಡ್ರೋ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ, ಶಹಪುರ ತಾಲ್ಲೂಕಿನ ಗಂಗನದಾಳ ಗ್ರಾಮದ ಶಹಪುರ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ-7ಕ್ಕೆ ಅಡ್ಡಲಾಗಿ 800 ಕಿಲೊ ವ್ಯಾಟ್ ಸಾಮರ್ಥ್ಯದ ಗಂಗನಾಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಸದರಿ ಸ್ಥಳದಲ್ಲಿ ನೀರಿನ ಸಾಮರ್ಥ್ಯ ಹೆಚ್ಚಿಗೆ ಇರುವುದರಿಂದ ಹಾಗೂ ಮುಂದೆ ಇರುವ ಇನ್ನೊಂದು ಡ್ರಾಪ್ 6 ಮೀ.ನ್ನು ಉಪಯೋಗಿಸಿ ಇನ್ನೂ ಹೆಚ್ಚಿನ 450 ಕಿಲೋ ವ್ಯಾಟ್ ವಿದ್ಯುತ್ ಉತ್ಪಾದನೆ ಸಾಧ್ಯತೆ ಇರುವುದರಿಂದ ಸಾಮರ್ಥ್ಯವನ್ನು 1.25 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 298 ಎನ್‌ಸಿಇ 2004, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಮೆಸರ್ಸ್ ಭಾವನ ಹೈಡ್ರೋ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ ಶಹಪುರ ತಾಲ್ಲೂಕಿನ ಗಂಗನದಾಳ ಗ್ರಾಮದ ಶಹಪುರ ಬ್ರಾಂಚ್ ಕಾಲುವೆಯಲ್ಲಿ 800 ಕಿಲೊ ವ್ಯಾಟ್ ಸಾಮರ್ಥ್ಯದ ಗಂಗನದಾಳ ಕಿರುಜಲ ವಿದ್ಯುತ್ ಯೋಜನೆಯನ್ನು 1.25 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

4. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗೊ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 82

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : KRED / 08 / FIZA / 2004 / 1664, ದಿನಾಂಕ: 3.9.2004.

2. ದಿನಾಂಕ: 4.12.2004 ರಂದು ನಡೆದ ಹಂಚಿಕೆ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ Fiza Developers & Inter Trade Private Limited, ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ಹೊಳಲ್‌ಕೆರೆ ತಾಲ್ಲೂಕಿನ ಕಸವನಹಳ್ಳಿ ಗ್ರಾಮದಲ್ಲಿ 2.25 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲಿನ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 4.12.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯು ಅನುಮೋದಿಸಿರುತ್ತದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 318 ಎನ್‌ಸಿಇ 2004, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ Fiza Developers & Inter Trade Private Limited, ಕಂಪನಿಗೆ, ಚಿತ್ರದುರ್ಗ ಜಿಲ್ಲೆಯ ಹೊಳಲ್‌ಕೆರೆ ತಾಲ್ಲೂಕಿನ ಕಸವನಹಳ್ಳಿ ಗ್ರಾಮದಲ್ಲಿ 2.25 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿದಂತೆ ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

| Villages | District | Description of the Area |
|---|---|---|
| Kasavanahalli village, Holelkere Taluk | Chitradurga | About 1 K.W. length ridge oriented in a north-west, south-east direction and is situated in the north of Kasavanahalli village, and has a peek 1054 ams.<br>Latitude : 14 4'30" - 13 5' N<br>Longitude : 76 5' 16" - 76 6' E |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾವ್ಯಾಟ್ ಒಂದಕ್ಕೆ ರೂ.25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ

ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ಆಗಿ ನಕ್ಷೆ ಮತ್ತು ವಿಂಡ್ ಫಾರ್ಮ್‌ನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುಚ್ಛಕ್ತಿ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| > 200 ಕಿಲೋ ವ್ಯಾಟ್‌ನಿಂದ 300 ಕಿಲೋವ್ಯಾಟ್ | 18 | 1 |
| > 300 ಕಿಲೋ ವ್ಯಾಟ್‌ನಿಂದ 500 ಕಿ.ವ್ಯಾ | 15 | 1 |
| > 500 ಕಿಲೋ ವ್ಯಾಟ್‌ನಿಂದ 750 ಕಿ.ವ್ಯಾ | 12 | 1 |
| > 750 ಕಿಲೋ ವ್ಯಾಟ್‌ನಿಂದ 1000 ಕಿ.ವ್ಯಾ | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ದ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ / ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 83 **ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿ ನಿಯಮಿತ, ಗುಲ್ಬರ್ಗಾ ಇಲ್ಲಿಗೆ ಅಧ್ಯಕ್ಷರನ್ನು ನೇಮಕ ಮಾಡುವ ಕುರಿತು - ಆದೇಶಗಳು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ: ಕೃತೋಇ 682 ಕೃಉಇ 2004, ದಿ: 01.12.2004.

2. ಸರ್ಕಾರದ ಸಮ ಸಂಖ್ಯೆಯ ತಿದ್ದುಪಡಿ ಆದೇಶ ದಿನಾಂಕ: 15.02.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ 9 ಜನ ಅಧಿಕಾರಿಗಳನ್ನು ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿಯ ನಿರ್ದೇಶಕರನ್ನಾಗಿ ನೇಮಕಾತಿ ಮಾಡಿ ಆದೇಶ ಹೊರಡಿಸಲಾಗಿತ್ತು. ಅಲ್ಲದೆ, ಮೇಲೆ (2)ರಲ್ಲಿ ಓದಲಾದ ತಿದ್ದುಪಡಿ ಆದೇಶದನ್ವಯ ಮತ್ತೊಂದು ಅಧಿಕಾರಿಯವರನ್ನು ಸಹ ನಿರ್ದೇಶಕರನ್ನಾಗಿ ನೇಮಕ ಮಾಡಲಾಗಿತ್ತು. ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿಯವರು ರಾಜ್ಯದಲ್ಲಿ ಮುಂಗಾರು 2004ರ ಹಂಗಾಮಿನಲ್ಲಿ ಉತ್ಪಾಧಿಸಿರುವ ತೊಗರಿಯನ್ನು ಖರೀದಿಸುವ ಕ್ರಮವನ್ನು ತೆಗೆದುಕೊಳ್ಳಬೇಕಾಗಿರುವುದರಿಂದ ರಾಜ್ಯ ಸರ್ಕಾರವು ಸದರಿ ಮಂಡಳಿಗೆ ಅಧ್ಯಕ್ಷರ ಅವಶ್ಯಕತೆ ಕಂಡು ಬಂದಿರುವುದರಿಂದ ಅದನ್ನು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 682 ಕೃಉಇ 2003, ಬೆಂಗಳೂರು, ದಿನಾಂಕ: 3ನೇ ಜನವರಿ 2005**

ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿಯ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಪ್ರಕರಣ 15(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಹೆಚ್. ಶಶಿಧರ, ಭಾ.ಆ.ಸೇ. ಕೃಷಿ ಆಯುಕ್ತರು, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ತೊಗರಿ ಅಭಿವೃದ್ಧಿ ಮಂಡಳಿಯ ಅಧ್ಯಕ್ಷರನ್ನಾಗಿ ನೇಮಕಾತಿ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 84 **ವಿ. ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಪಿ.ಎಸ್. ವಸ್ತ್ರದ್ ಕೆ.ಎ.ಎಸ್. ಅಧಿಕಾರಿ ವಿರುದ್ಧ ಇಲಾಖಾ ವಿಚಾರಣೆ - ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ನೋಟೀಸ್ ಸಂಖ್ಯೆ:ಸಿಆಸುಇ 15 ಎಸ್‌ಇಎನ್ 2004 ದಿನಾಂಕ: 24.2.2004.

2. ಶ್ರೀ ಪಿ.ಎಸ್. ವಸ್ತ್ರದ್ ರವರ ದಿನಾಂಕ: 22.6.2004ರ ಲಿಖಿತ ಉತ್ತರ.

3. ಕಂದಾಯ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ:ಕಂಇ 57 ಭೂಸ್ವಾವಿ 98 ದಿನಾಂಕ: 30.10.2004.

**ಪ್ರಸ್ತಾವನೆ:**

ಶ್ರೀ ಪಿ.ಎಸ್. ವಸ್ತ್ರದ್ ಕೆ.ಎ.ಎಸ್. ಇವರು 1984-86ರ ಅವಧಿಯಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆ ಆಲಮಟ್ಟಿಯಲ್ಲಿ ಹೆಚ್ಚುವರಿ ವಿಶೇಷ ಭೂಸ್ವಾಧೀನಾಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಬಸವನಬಾಗೇವಾಡಿ ತಾಲ್ಲೂಕಿನ ಕೋಲಾರ ಗ್ರಾಮದ ಸರ್ವೆ ನಂಬರ್ 61ಕ್ಕೆ ಸಂಬಂಧಿಸಿದಂತೆ,

ಹೆಚ್ಚುವರಿ ಭೂಸ್ವಾಧೀನ ಪರಿಹಾರ ಧನ ಪಾವತಿ ಸಂಬಂಧ ಮೂಲ ಪರಿಹಾರ ಧನವನ್ನು ನ್ಯಾಯಾಲಯಕ್ಕೆ ಭರಣ ಮಾಡದೆ ಕರ್ತವ್ಯ ಲೋಪದಿಂದ ಭೂಮಾಲೀಕರಿಗೆ ರೂ.58,460/- ಬಡ್ಡಿ ಪಾವತಿಗೆ ಕಾರಣರಾದರು ಎಂಬ ಆರೋಪದ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಮೇಲೆ(1) ರಲ್ಲಿ ಓದಲಾದ ದಿನಾಂಕ: 24.2.2004ರ ನೋಟೀಸ್ ಜಾರಿ ಮಾಡುವುದರ ಮೂಲಕ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಈ ಬಗ್ಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 22.6.2004ರ ಲಿಖಿತ ಉತ್ತರವನ್ನು ಸಲ್ಲಿಸಿದ ಆರೋಪಿತ ಅಧಿಕಾರಿಗಳಾದ ಶ್ರೀ ಪಿ.ಎಸ್. ವಸ್ತ್ರದ್ ರವರು ತಾವು ಯಾವುದೇ ದುರ್ನಡತೆಯನ್ನು ಎಸಗಿಲ್ಲವೆಂದು ತಾವು ಕೃಷ್ಣಾ ಮೇಲ್ದಂಡೆ ಯೋಜನಾ ಆಲಮಟ್ಟಿಯಲ್ಲಿ ಹೆಚ್ಚುವರಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಸೇರುವುದಕ್ಕಿಂತ ಮುಂಚಿನ ಅಧಿಕಾರಿಗಳು ಕೋಲಾರ ಗ್ರಾಮದ ಸರ್ವೆ ನಂಬರ್ 61ಕ್ಕೆ ಸಂಬಂಧಿಸಿದಂತೆ ಹೆಚ್ಚುವರಿ ಭೂಸ್ವಾಧೀನ ಪರಿಹಾರಧನ ಪಾವತಿಗಾಗಿ ಎಲ್.ಎ.ಸಿ.ನಂ.1585-82 ದಿನಾಂಕ:14.12.1982 ರಂದು ನ್ಯಾಯಾಲಯದಲ್ಲಿ ದಾಖಲು ಮಾಡಿರುತ್ತಾರೆ. ತಾವು ಅಲ್ಲಿಗೆ ಹೆಚ್ಚುವರಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ದಿನಾಂಕ: 25.1.1984 ರಂದು ಪದಗ್ರಹಣ ಮಾಡಿದ್ದು ಎಲ್.ಎ.ಸಿ.ನಂ.1985-82 ರನ್ನು ದಾಖಲೆ ಮಾಡುವಾಗ ತಾವು ಹೆಚ್ಚುವರಿ ಭೂಸ್ವಾಧೀನಾಧಿಕಾರಿ ಹುದ್ದೆಯಲ್ಲಿ ಇರಲಿಲ್ಲವೆಂದು ಆಗ ತಾವು ಮೈಸೂರಿನಲ್ಲಿ ಕೆ.ಎ.ಎಸ್.ಪ್ರೊಬೆಷರರಾಗಿ ತರಬೇತಿಯಲ್ಲಿದ್ದೆನು. ಆದುದರಿಂದ ಆರೋಪಗಳನ್ನು ಒಪ್ಪುವುದಿಲ್ಲವೆಂದು ನಿರಾಕರಿಸಿದ್ದಾರೆ.

ಈ ಬಗ್ಗೆ ಮೇಲೆ (3) ರಲ್ಲಿನ ಕಂದಾಯ ಇಲಾಖೆಯ ವರದಿ ಪ್ರಕಾರ ಆರೋಪಿತರ ಲಿಖಿತ ಹೇಳಿಕೆಯನ್ನು ಪರಿಶೀಲಿಸಲಾಗಿ, ಭೂಸ್ವಾಧೀನಪಡಿಸಿಕೊಳ್ಳುವ ಬಗ್ಗೆ ಐತೀರ್ಪನ್ನು ಹಿಂದಿನ ಭೂಸ್ವಾಧೀನಾಧಿಕಾರಿಗಳಾದ ಶ್ರೀ ವೈ.ಎಸ್. ಪಾಟೀಲ ಕೃಷ್ಣ ಮೇಲ್ದಂಡೆ ಯೋಜನೆ ಆಲಮಟ್ಟಿ ರವರು ದಿನಾಂಕ: 31.12.1981 ರಂದು ರಚಿಸಿದ್ದು ಅದನ್ನು ವಿಶೇಷ ಜಿಲ್ಲಾಧಿಕಾರಿಗಳು ಆಲಮಟ್ಟಿ ರವರು ದಿನಾಂಕ: 31.12.1981 ರಂದು ಅನುಮೋದಿಸಿದ್ದಾರೆ. ನಿಯಮಾನುಸಾರ ಭೂಸ್ವಾಧೀನ ಕಾಯ್ದೆ ಕಲಂ 30 ರಡಿ ನ್ಯಾಯಾಲಯದಲ್ಲಿ ಸಿವಿಲ್ ಡಿಪಾಸಿಟ್ ಇಡಬೇಕಾಗಿತ್ತು. ಆದರೆ ಅಂದಿನ ಭೂಸ್ವಾಧೀನಾಧಿಕಾರಿಗಳಾದ ಶ್ರೀ ವೈ.ಎಸ್. ಪಾಟೀಲ್ ಹಿಂದಿನ ವಿಶೇಷ ಭೂಸ್ವಾಧೀನಾಧಿಕಾರಿಯವರು ಇದಕ್ಕೆ ತದ್ವಿರುದ್ಧವಾಗಿ ರೆವಿನ್ಯೂ ಡಿಪಾಸಿಟ್‌ನಲ್ಲಿಟ್ಟಿದ್ದರಿಂದ ಈ ಗೊಂದಲಕ್ಕೆ ಕಾರಣವಾಗಿರುತ್ತದೆ. ಆದ್ದರಿಂದ ಶ್ರೀ ಪಿ.ಎಸ್. ವಸ್ತ್ರದ್ ರವರು ಅವರ ಮೇಲಿನ ದೋಷಾರೋಪಣೆಗೆ ಸಲ್ಲಿಸಿರುವ ಲಿಖಿತ ಸಮಜಾಯಿಷಿಯನ್ನು ಒಪ್ಪಿ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಲು ಕಂದಾಯ ಇಲಾಖೆಯು ಶಿಫಾರಸ್ಸು ಮಾಡಿದೆ.

ಮೇಲ್ಕಂಡ ಶ್ರೀ ಪಿ.ಎಸ್. ವಸ್ತ್ರದ್ ರವರ ಲಿಖಿತ ಉತ್ತರ ಮತ್ತು ಕಂದಾಯ ಇಲಾಖೆಯ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಆರೋಪಿತ ಅಧಿಕಾರಿಯವರ ಸಮಜಾಯಿಷಿಯನ್ನು ಒಪ್ಪಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 15 ಎಸ್‌ಇಎನ್ 2004, ದಿನಾಂಕ: 30ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಶ್ರೀ ಪಿ.ಎಸ್. ವಸ್ತ್ರದ್ ಕೆ.ಎ.ಎಸ್. ಅಧಿಕಾರಿ ರವರ ವಿರುದ್ಧ ಮಾಡಲಾದ ಮೇಲಿನ ದೋಷಾರೋಪಣೆಗಳಿಂದ ಸದರಿಯವರನ್ನು ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶಿಸಿದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ಪಿ.ಎಸ್. ವಸ್ತ್ರದ್ ರವರು ಯಾವ ಸೌಲಭ್ಯಗಳಿಗೆ ಅರ್ಹರಿದ್ದರೂ ಅಂತಹ ಎಲ್ಲ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 85

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

**ವಿಷಯ:** ಶ್ರೀ ಎಸ್.ಎ. ಡಂಬಳ್, ಕೆಎಎಸ್ ಅಧಿಕಾರಿ ಇವರು ಕೃಷ್ಣಾ ಮೇಲ್ದಂಡೆ ಯೋಜನೆ ಬಾಗಲಕೋಟೆಯಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಎಸಗಿದ ದುರ್ನಡತೆ ವಿರುದ್ಧ ಇಲಾಖಾ ವಿಚಾರಣೆ-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಎಸ್‌ಇಎನ್ 95 ದಿನಾಂಕ: 22.9.1997.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಎಸ್‌ಇಎನ್ 95 ದಿನಾಂಕ: 4.6.2002.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 19 ಎಸ್‌ಇಎನ್ 99 ದಿನಾಂಕ: 30.3.2004.
4. ಉತ್ತರ ಕನ್ನಡ ಜಿಲ್ಲಾಧಿಕಾರಿ ಹಾಗೂ ವಿಚಾರಣಾಧಿಕಾರಿಗಳ ವರದಿ ದಿನಾಂಕ 6.12.2004.
5. ಸರ್ಕಾರದ ನೋಟೀಸ್ ಸಂಖ್ಯೆ: ಸಿಆಸುಇ 19 ಎಸ್‌ಇಎನ್ 99 ದಿನಾಂಕ: 7.12.2004.

**ಪ್ರಸ್ತಾವನೆ:**

ಶ್ರೀ ಎಸ್.ಎ. ಡಂಬಳ್, ಕೆಎಎಸ್ ಅಧಿಕಾರಿ ಇವರು ಬಾಗಲಕೋಟೆ ಅಭಿವೃದ್ಧಿ ಪ್ರಾಧಿಕಾರದಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಎಸಗಿದ್ದ ದುರ್ನಡತೆಗಳ ಸಂಬಂಧ ಅವರ ವಿರುದ್ಧ ಈ ಕೆಳಕಂಡ ದೋಷಾರೋಪಣೆಗಳನ್ನು ಹೊರಿಸಲಾಗಿತ್ತು.

**ಆರೋಪಗಳ ಸಂಕ್ಷಿಪ್ತ ವಿವರ**

1. ಗುಂಡನಪಲ್ಲಿ, ಮೈಗೂರಾ ಮತ್ತು ಲಿಂಗಾಪುರ ಎಸ್.ಆರ್. ಗ್ರಾಮಗಳಿಗೆ ಸಂಬಂಧಿಸಿದ ಪ್ರಕರಣಗಳಲ್ಲಿ ಕಲಂ 28(ಅ) ನ್ಯಾಯಾಲಯದಲ್ಲಿ ಅರ್ಜಿ ಬಾಕಿ ಇದ್ದರೂ ಸಹ ಐತೀರ್ಪುಗಳನ್ನು ಮಂಜೂರು ಮಾಡುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.
2. ಎಲ್‌ಸಿ 426/84 ಇಪಿ 570/92 ಇದರಲ್ಲಿ ಉಚ್ಚ ನ್ಯಾಯಾಲಯದ ಎಂಎಫ್‌ಎ 1710/84 ದಿನಾಂಕ:2.3.94ರ ಆದೇಶಕ್ಕೆ ವ್ಯತಿರಿಕ್ತವಾಗಿ ಡಿಕ್ರಿ ಹಣ ತುಂಬಲು ಬಿಲ್ಲು ತಯಾರಿಸಿರುತ್ತಾರೆ.
3. ಜಮಖಂಡಿ ತಾಲ್ಲೂಕು ಸಾವಳಗಿ ಚಿಕ್ಕ ಜಂಬಗಿ ಗ್ರಾಮಕ್ಕೆ ಸಂಬಂಧಿಸಿದ ಭೂಸ್ವಾಧೀನ ಪ್ರಕರಣದಲ್ಲಿ ಇವರ ನಿರ್ಲಕ್ಷ್ಯತನದಿಂದ ಅಸಿಂಧುಗೊಳ್ಳಲು ಕಾರಣರಾಗಿದ್ದಾರೆ.
4. ಕಡಕೋಳ, ಮೇಗೂರ, ಜನವಾಡ, ಕಂಕಣವಾಡಿ, ಮುತ್ತೂರು ಗ್ರಾಮಗಳ ಐತೀರ್ಪು ಇವರ ನಿರ್ಲಕ್ಷ್ಯತನದಿಂದ ಸರ್ಕಾರಕ್ಕೆ ಹೆಚ್ಚಿನ ಭಾರ ಬಿದ್ದಿದೆ.
5. ಬಾಗಲಕೋಟೆ ನಗರದ 116 ಪ್ರಕರಣಗಳ ಭೂಸ್ವಾಧೀನ ನಡವಳಿಕೆಗಳನ್ನು ವಿಳಂಬ ಮಾಡಿದ್ದರಿಂದ ಅವು ಅಸಿಂಧುಗೊಂಡಿದೆ.
6. ಗದ್ದನಕೇರಿ ಗ್ರಾಮದ ಜಮೀನುಗಳ ಭೂಸ್ವಾಧೀನ ನಡೆವಳಿಗಳನ್ನು ನಿಗದಿತ ಅವಧಿಯಲ್ಲಿ ಪೂರ್ತಿಗೊಳಿಸದೇ ವಿನಾ: ಕಾರಣ ವಿಳಂಬಮಾಡಿದ್ದಾರೆ.

7. ಬೀಳಗಿ ತಾಲ್ಲೂಕು ಬಳ್ಳೂರ ಗ್ರಾಮದಲ್ಲಿ ಪುನರ್ವಸತಿ ಕೇಂದ್ರ ನಿರ್ಮಿಸಲು ಹಾಗೂ ಜುಂಜರಕೊಪ್ಪ ಗ್ರಾಮಕ್ಕೆ ಸಂಬಂಧಿಸಿದ ಕಲಂ 6ರ ಘೋಷಣೆಗಳನ್ನು ಸಮೂಹ ವ್ಯವಸ್ಥಾಪಕರು 13 ನೆನಪೋಲೆಗಳನ್ನು ನೀಡಿದ್ದರೂ ಸರ್ಕಾರಕ್ಕೆ ಪ್ರಸ್ತಾವನೆಗಳನ್ನು ಸಲ್ಲಿಸಲು ವಿಳಂಬ ಮಾಡಿದ್ದಾರೆ.
8. ಒಂದೇ ಆಸ್ತಿಗೆ ಎರಡು ಸಲ ಬಿಲ್ಲು ತಯಾರಿಸಿ ಹೆಚ್ಚುವರಿಯಾಗಿ ರೂಪಾಯಿ 94.57 ಲಕ್ಷ ಹೆಚ್ಚುವರಿ ಪರಿಹಾರ ಧನ ಕ್ಲೇಮಿಗ್ ಕಾರಣರಾಗಿರುತ್ತಾರೆ.
9. ಭೂಸ್ವಾಧೀನ ಪ್ರಕರಣಗಳಿಗೆ ಸಂಬಂಧಿಸಿದ ರಿಜಿಸ್ಟರ್‌ಗಳನ್ನು ನಿರ್ವಹಿಸದೇ ಕರ್ತವ್ಯಚ್ಯುತಿ ಎಸಗಿರುತ್ತಾರೆ.
10. ಬಾಗಲಕೋಟೆ ನಗರದ ಕಟ್ಟಡಗಳ ಬಗ್ಗೆ ಕರಡು ಐತೀರ್ಪುನ್ನು ಸರ್ಕಾರದಿಂದ ಅನುಮೋದಿಸಿ ಪರಿಹಾರಧನ ವಿತರಣೆ ಕುರಿತು ಅವಧಿ ನಿಗದಿಪಡಿಸಲು ಸೂಚಿಸಿದರೂ ಮೇಲಾಧಿಕಾರಿಗಳ ಆದೇಶವನ್ನು ಪಾಲಿಸಿಲ್ಲ.
11. ಮಾರ್ಚ್ 95 ಕೊನೆಯ ವಾರದಲ್ಲಿ ಆರ್ಥಿಕ ವರ್ಷ ಮುಕ್ತಾಯ ಸಂದರ್ಭದಲ್ಲಿ ಸಾಂದರ್ಭಿಕ ರಜೆ ತಿರಸ್ಕರಿಸಿದ್ದರೂ ಸಹ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ.
12. ಭೂಸ್ವಾಧೀನ ತಿದ್ದುಪಡಿ ಕಾಯ್ದೆ 28(ಅ) ರಡಿ ಸ್ವೀಕರಿಸಿದ ಅರ್ಜಿಗಳ ಬಗ್ಗೆ ಸರಿಯಾದ ಕ್ರಮ ತೆಗೆದುಕೊಳ್ಳದೆ ವಾಸ್ತವಾಂಶಗಳನ್ನು ಮುಚ್ಚಿಟ್ಟಿರುತ್ತಾರೆ. 237 ಐತೀರ್ಪುಗಳಿಗೆ ಸಂಬಂಧಿಸಿದ ಮೊತ್ತ 96.30 ಲಕ್ಷ ಸರ್ಕಾರಕ್ಕೆ ಆರ್ಥಿಕ ಹಾನಿ ಉಂಟು ಮಾಡುವ ಉದ್ದೇಶದಿಂದ ವರ್ತಿಸಿರುತ್ತಾರೆ.
13. ಕಾರ್ಯಾಲಯದಲ್ಲಿ ಸ್ವೀಕೃತವಾದ ಅರ್ಜಿಗಳನ್ನು ಸಂಬಂಧಿಸಿದ ವಹಿಗಳಿಗೆ ದಾಖಲೆ ತೆಗೆದುಕೊಳ್ಳದೆ ದುರ್ನಡತೆ ಎಸಗಿರುತ್ತಾರೆ.
14. ಶ್ರೀ ಶಿವಕುಮಾರ ಮಲ್ಲಾರಿಗೌಡ, ಗುಂಡನಪಲ್ಲಿ ಇವರಿಗೆ ರೂ.6.96 ಲಕ್ಷ ಹೆಚ್ಚಿಗೆ ಪಾವತಿ ಮಾಡಲು ಕಾರಣರಾಗಿದ್ದಾರೆ.

ಅದರಂತೆ ಮೇಲ್ಕಂಡ ದೋಷಾರೋಪಣೆ ಕುರಿತು ವಿಚಾರಣೆ ನಡೆಸಲು ಮೇಲೆ ಉಲ್ಲೇಖ (1)ರ ಆದೇಶ ದಿನಾಂಕ: 22.9.97 ರಲ್ಲಿ ಬೆಳಗಾವಿ ವಿಭಾಗಾಧಿಕಾರಿಯವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ತದನಂತರ ವಿಚಾರಣೆಯನ್ನು ಕೈಗೊಂಡು ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿದ್ದ ವಿಚಾರಣಾ ವರದಿಯನ್ನು ಪರಿಶೀಲಿಸಿ ಉಲ್ಲೇಖ (2)ರ ಆದೇಶ ದಿನಾಂಕ: 4.6.2002ರಲ್ಲಿ ಇವರ ವೇತನವನ್ನು 2 ವರ್ಷಗಳ ಅವಧಿಗೆ ರೂ.10,880ಕ್ಕೆ ಇಳಿಸುವ ದಂಡನೆಯನ್ನು ವಿಧಿಸಲಾಗಿತ್ತು. ಈ ಆದೇಶದ ವಿರುದ್ಧ ಆರೋಪಿತ ಅಧಿಕಾರಿಯು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ: 14/99ನ್ನು ಪುರಸ್ಕರಿಸಿ ನ್ಯಾಯಾಲಯವು ಸರ್ಕಾರದ ಆದೇಶವನ್ನು ರದ್ದುಗೊಳಿಸಿ ಮರು ವಿಚಾರಣೆಯನ್ನು ನಡೆಸುವ ಅಧಿಕಾರವನ್ನು ಸಹ ಸರ್ಕಾರಕ್ಕೆ ನೀಡದೆ ತೀರ್ಪನ್ನು ನೀಡಿತ್ತು. ತದನಂತರ ಸರ್ಕಾರವು ರಿಟ್ ಅರ್ಜಿ ಸಂಖ್ಯೆ: 40889/2003ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶವನ್ನು ಪ್ರಶ್ನಿಸಿ ಉಚ್ಚ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿದ್ದರ ಮೇರೆಗೆ ಉಚ್ಚ ನ್ಯಾಯಾಲಯವು ವಿಚಾರಣೆಯ ಲೋಪ ಕಂಡು ಬಂದ ಹಂತದಿಂದ ಮತ್ತೆ ವಿಚಾರಣೆಯನ್ನು ಆರು ತಿಂಗಳ ಒಳಗೆ ಪೂರ್ಣಗೊಳಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡಿ ಆದೇಶಿಸಿತ್ತು.

ಈ ಹಿನ್ನೆಲೆಯಲ್ಲಿ ಉಲ್ಲೇಖ (3)ರಲ್ಲಿ ಓದಲಾದ ಆದೇಶ ದಿನಾಂಕ: 30.3.2004 ರಲ್ಲಿ ಉತ್ತರ ಕನ್ನಡ ಜಿಲ್ಲಾಧಿಕಾರಿಗಳನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ಈ ವಿಚಾರಣೆಯನ್ನು ಕೆಲವು ಆಡಳಿತಾತ್ಮಕ ಸಮಸ್ಯೆಗಳಿಂದ ಈ ಕಾಲಾವಧಿಯೊಳಗೆ ಪೂರ್ತಿಗೊಳಿಸಲು ಸಾಧ್ಯವಾಗದ ಕಾರಣ ಉಚ್ಚ ನ್ಯಾಯಾಲಯದಲ್ಲಿ ಸರ್ಕಾರವು ಐ.ಎ. ಸಲ್ಲಿಸಿದ್ದರ ಮೇರೆಗೆ ವಿಚಾರಣೆಯನ್ನು ದಿನಾಂಕ: 31.12.2004ರ ಒಳಗೆ ಪೂರ್ಣಗೊಳಿಸಲು ಉಚ್ಚ ನ್ಯಾಯಾಲಯವು ಆದೇಶಿಸಿತು. ಉಲ್ಲೇಖ (4)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಯವರು ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ವಿಚಾರಣಾ ವರದಿಯನ್ನು ಸರ್ಕಾರವು ಆಪಾದಿತ ಅಧಿಕಾರಿಗೆ ಉಲ್ಲೇಖ (5)ರಲ್ಲಿನ ನೋಟೀಸ್ ದಿನಾಂಕ: 7.12.2004ರ ಮೂಲಕ ಒದಗಿಸಿ ಅವರ ಹೇಳಿಕೆಯನ್ನು ನೀಡಲು ಅವಕಾಶವನ್ನು ನೀಡಲಾಗಿತ್ತು. ಆದರೆ ಆಪಾದಿತ ಅಧಿಕಾರಿಯು ಈ ನೋಟೀಸಿಗೆ ಅವರ ದಿನಾಂಕವಿಲ್ಲದ ಪತ್ರದಲ್ಲಿ ಉತ್ತರಿಸುತ್ತಾ ಸದರಿ ನೋಟೀಸನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಪ್ರಶ್ನಿಸಿರುತ್ತಾರೆಂದು ಮತ್ತು ಆಡಳಿತ ನ್ಯಾಯ ಮಂಡಳಿಯು ಸದರಿ ಅರ್ಜಿಯನ್ನು ಆದೇಶಕ್ಕೆ ಕಾಯ್ದಿರಿಸಿದೆಯೆಂದು ಅದರಲ್ಲಿ ಆಗುವ ನಿರ್ಣಯದ ನಂತರ ಅವರು ಹೇಳಿಕೆ ನೀಡಲು ಕಾಲಾವಕಾಶ ನೀಡಬೇಕಾಗಿ ಮನವಿ ಮಾಡಿದ್ದಾರೆ. ಈ ಮನವಿಯನ್ನು ಪರಿಶೀಲಿಸಲಾಗಿ ಈ ನೋಟೀಸಿಗೆ ಉತ್ತರಿಸಲು ಯಾವುದೇ ನಿರ್ಬಂಧವಿಲ್ಲದಿದ್ದುದರಿಂದ ಹಾಗೂ ಕರ್ನಾಟಕ ಆಡಳಿತ ನ್ಯಾಯಮಂಡಳಿಯಿಂದ ಯಾವುದೇ ಸೂಚನೆ/ನಿರ್ದೇಶನ ಸರ್ಕಾರಕ್ಕೆ ಬಂದಿಲ್ಲದಿರುವುದರಿಂದ ಹಾಗೂ ಇವರ ಮನವಿಯಲ್ಲಿ ಯಾವುದೇ ಸಕಾರಣಗಳು ಇಲ್ಲವಾದ್ದರಿಂದ ಅವರ ಮನವಿಯನ್ನು ತಿರಸ್ಕರಿಸಿ ಸರ್ಕಾರದ ಪತ್ರ ದಿನಾಂಕ 31.12.2004 ರಲ್ಲಿ ಅವರಿಗೆ ಸೂಕ್ತ ಹಿಂಬರಹವನ್ನು ನೀಡಲಾಗಿದೆ.

ಪ್ರಸ್ತುತ ವಿಚಾರಣಾಧಿಕಾರಿಯವರು ಸಲ್ಲಿಸಿರುವ ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದೆ. ಮೇಲ್ಕಂಡ ಆರೋಪಗಳ ಬಗ್ಗೆ ಆರೋಪ 1,2,3,5,6,7,8,9 ಮತ್ತು 12ರಲ್ಲಿನ ಆರೋಪಗಳು ರುಜುವಾತಾಗಿದೆಯೆಂದು ಮತ್ತು ಆರೋಪ 4,10,11,13,14 ರುಜುವಾತಾಗಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ನೀಡಿರುತ್ತಾರೆ. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ಮತ್ತು ನಡವಳಿಗಳನ್ನು ಪರಿಶೀಲಿಸಿದ ಸರ್ಕಾರವು ವಿಚಾರಣೆಯನ್ನು ನಿಯಮಾನುಸಾರ ನಡೆಸಿರುವುದನ್ನು ಮನಗಂಡು ಹಾಗೂ ವಿಚಾರಣಾ ವರದಿಯ ಬಗ್ಗೆ ಆರೋಪಿತರಿಂದ ಸಕಾಲದಲ್ಲಿ ಏನೂ ಅಹವಾಲು ಇಲ್ಲದಿರುವುದನ್ನು ಮತ್ತು ವಿಚಾರಣೆಯಲ್ಲಿ ಸಾಬೀತಾಗಿರುವ ಆರೋಪಗಳ ಸ್ವರೂಪವನ್ನು ಗಣನೆಗೆ ತೆಗೆದುಕೊಂಡು ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ಎಸ್‌ಇಎನ್ 99, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಎಸ್.ಎ. ಡಂಬಳ್, ಕೆಎಎಸ್ ಇವರ ವೇತನವನ್ನು ಕೆ.ಸಿ.ಎಸ್ (ಸಿ.ಸಿ.ಎ) ನಿಯಮಾವಳಿಗಳನ್ನು 1957ರ ನಿಯಮ 8(iv-a) ರಡಿ ವೇತನ ಶ್ರೇಣಿ 8000-13440 ರಲ್ಲಿನ ಹಾಲಿ ವೇತನ ರೂ.13,120/- ರಿಂದ ರೂ.11,840/-ಗೆ ಅಂದರೆ 4 ಹಂತ ಇಳಿಸುವ ದಂಡನೆಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ವಿಧಿಸಿದೆ:

1. ಈ ದಂಡನೆಯು ಶಾಶ್ವತ ಪರಿಣಾಮ ಹೊಂದಿರುತ್ತದೆ. ಅಂದರೆ ಇವರ ನಿವೃತ್ತಿ ನಂತರ ಸದರಿ ಕೆಳಗಿಳಿಸಿದ ವೇತನವು ಪುನಃ ಸ್ಥಾಪಿತವಾಗುವುದಿಲ್ಲ.
2. ಈ ದಂಡನೆಯ ಅವಧಿಯಲ್ಲಿ ಇವರು ಯಾವುದೇ ವಾರ್ಷಿಕ ವೇತನ ಬಡ್ತಿಗೆ ಅರ್ಹರಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 86

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

**ವಿಷಯ:** ಸರ್ಕಾರದ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ ಹುದ್ದೆಯನ್ನು ಪ್ರಧಾನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ ಹುದ್ದೆ ಎಂದು ಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 396 ಎಸ್ಎಎಸ್ 2004 ದಿನಾಂಕ: 25.11.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರ ಅಧಿಸೂಚನೆಯಲ್ಲಿ ಶ್ರೀ ಸಿ.ಎಸ್. ಕೇದಾರ್, ಐಎಎಸ್, ಸರ್ಕಾರದ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ ಇವರಿಗೆ ಐಎಎಸ್‌ನ ಸೂಪರ್ ಟೈಂ ಸ್ಕೇಲ್‌ಗೆ ಸ್ಥಾನಪನ್ನ ಬಡ್ತಿ ನೀಡಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ ಹುದ್ದೆಗೆ ನೇಮಿಸಲಾಗಿರುತ್ತದೆ. ಆದ್ದರಿಂದ ಸರ್ಕಾರದ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ ಹುದ್ದೆಯನ್ನು ಪದನಾಮೀಕರಿಸುವ ಅಗತ್ಯತೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 94 ಸಸಿವಿ 2004, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಸಿ.ಎಸ್. ಕೇದಾರ್, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ ಹುದ್ದೆ : ಎಂದು ಮರುಪದನಾಮೀಕರಿಸಲಾಗಿದೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಶಾಖೆಗೆ ಆದೇಶ ಸಂಖ್ಯೆ: ಸಿಆಸುಇ 69 ಆಶಿಸೇ 2003, ದಿನಾಂಕ: 14.7.2003 ರಲ್ಲಿ ನಿಗದಿಪಡಿಸಿರುವ ಪೂರಕ ಸಿಬ್ಬಂದಿ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 87

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

**ವಿಷಯ:** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಕಾರ್ಯದರ್ಶಿ ಹುದ್ದೆಯನ್ನು ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 607 ಎಸ್ಎಎಸ್ 2004 ದಿನಾಂಕ: 1.12.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀಮತಿ ರಂಜನಿ ಶ್ರೀಕುಮಾರ್, ಐಎಎಸ್, ಇವರನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉನ್ನತೀಕರಿಸಿದ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ. ಆದ್ದರಿಂದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪ್ರಸ್ತುತ ಅಸ್ತಿತ್ವದಲ್ಲಿರುವ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಅಗತ್ಯತೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 95 ಸಸಿವಿ 2004 (2), ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸಲಾಗಿದೆ.

ಸದರಿ ಹುದ್ದೆಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 69 ಆಶಿಸೇ 2003, ದಿನಾಂಕ: 14.7.2003 ರಲ್ಲಿ ನಿಗದಿಪಡಿಸಿರುವ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 88

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ 'ಚುನಾವಣೆಗಳು' ವಿಭಾಗದಲ್ಲಿ ಅಸ್ತಿತ್ವದಲ್ಲಿರುವ ಜೂನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಚುನಾವಣಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಚುನಾವಣೆಗಳು) ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಸಿಆಸುಇ 68 ಚುಸಿಆ 2003 ದಿನಾಂಕ: 25.6.2004.

2. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 37 ಇಅಇ 2003, ದಿನಾಂಕ: 2.11.2004.

**ಪ್ರಸ್ತಾವನೆ:**

ಮುಖ್ಯ ಚುನಾವಣಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಚುನಾವಣೆಗಳು) ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 25.6.2004ರ ಅರೆ ಸರ್ಕಾರಿ ಪತ್ರದಲ್ಲಿ ಚುನಾವಣೆಗಳು ವಿಭಾಗದಲ್ಲಿ ಜೂನಿಯರ್ ಪ್ರೋಗ್ರಾಮರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ, ಶ್ರೀ ಬಿ.ವಿ. ಕಿರಣ್‌ಕುಮಾರ್ ಇವರು ದಿನಾಂಕ: 31.12.2003 ರಂದು ವಯೋ ನಿವೃತ್ತಿ ಹೊಂದಿದ್ದು, ಆ ದಿನದಿಂದಲೂ ಈ ಹುದ್ದೆಯು ಖಾಲಿ ಇರುತ್ತದೆ. ಆದರೆ, ಚುನಾವಣಾ ಕಛೇರಿಯಲ್ಲಿನ ಕಾರ್ಯ ನಿರ್ವಹಣೆಯ ದೃಷ್ಟಿಯಿಂದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಗವರ್‌ನೆನ್ಸ್) ವಿಭಾಗದಲ್ಲಿ ಸೀನಿಯರ್ ಪ್ರೋಗ್ರಾಮರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಎನ್. ರಾಜು ಇವರನ್ನು ಅನ್ಯ ಕರ್ತವ್ಯದ ಮೇಲೆ ಚುನಾವಣಾ ವಿಭಾಗದಲ್ಲಿ ಕಾರ್ಯ ನಿರ್ವಹಿಸಲು ಕಳುಹಿಸಿದ್ದು, ಇವರು ಈ ಕಾರ್ಯವನ್ನು ಅತ್ಯಂತ ಸಮರ್ಥವಾಗಿ ನಿರ್ವಹಿಸುತ್ತಿದ್ದಾರೆ. ಇವರ ಸೇವೆಯು ಈ ವಿಭಾಗಕ್ಕೆ ಅಗತ್ಯವಾಗಿ ಬೇಕಾಗಿರುವುದರಿಂದ ಇವರನ್ನು ಚುನಾವಣೆಗಳು ವಿಭಾಗಕ್ಕೆ ನಿಯೋಜನೆ ಮೇರೆಗೆ ತೆಗೆದುಕೊಳ್ಳುವ ಸಲುವಾಗಿ ಪ್ರಸ್ತುತ ಇರುವ ಜೂನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನಾಗಿ ಉನ್ನತೀಕರಿಸಿ ಈ ಹುದ್ದೆಗೆ ಶ್ರೀ ಎನ್. ರಾಜು ಇವರನ್ನು ನಿಯೋಜನೆ ಮೇರೆಗೆ ನೇಮಿಸುವಂತೆ ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ 'ಇ-ಆಡಳಿತ' ವಿಭಾಗವು ಶ್ರೀ ಎನ್. ರಾಜು, ಸೀನಿಯರ್ ಪ್ರೋಗ್ರಾಮರ್ ಇವರ ಸೇವೆಯನ್ನು 'ಚುನಾವಣೆಗಳು' ವಿಭಾಗದಲ್ಲಿ ನಿಯೋಜನೆ ಮೇಲೆ ಪಡೆದುಕೊಳ್ಳುವ ಅಭ್ಯಂತರವಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 56 ಸಸಿವಿ 2004, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಚುನಾವಣೆಗಳು ವಿಭಾಗದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಜೂನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ - ಶ್ರೀ ಎನ್. ರಾಜು, ಸೀನಿಯರ್ ಪ್ರೋಗ್ರಾಮರ್ ಇವರನ್ನು ಸದರಿ ಹುದ್ದೆಗೆ ನೇಮಿಸುವ ಕಾರಣಕ್ಕಾಗಿ ವೇತನ ಶ್ರೇಣಿ ರೂ. 7400 - 13120ರ ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನಾಗಿ ಉನ್ನತೀಕರಿಸಲಾಗಿದೆ. ಉನ್ನತೀಕರಿಸಲಾದ ಹುದ್ದೆಯ ಅವಧಿ ಅಂತ್ಯಗೊಳ್ಳುವ ಮೊದಲು ಜೂನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ತುಂಬಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ 'ಚುನಾವಣೆಗಳು' ವಿಭಾಗವು ಅವಶ್ಯ ಕ್ರಮ ತೆಗೆದುಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 1254 ವೆಚ್ಚ-5: 2004, ದಿನಾಂಕ:10.8.2004 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 89

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

## ENERGY SECRETARIAT

**Sub:** Enhancement of Wind Power capacity from 41.25 M.W. to 42.5 M.W. in favour of M/s Suzlon Energy Limited at Sogi, Bellary District.

**Read:**
1. Government Order No : DE 34 NCE 2004, dated : 9.11.2004.
2. Letter No : KRED / 08 / SEL / 2004 / 2272, dated : 14.12.2004 received from the Managing Director, Karnataka Renewable Energy Development Limited, Bangalore.

**Preamble:-**

In the Government Order read at (1) above, sanction was accorded enhancing the capacity of Wind Power capacity from 30 M.W. to 41.25 M.W. in favour of M/s Suzlon Energy Limited, at Sogi, Bellary District.

2. In the letter read at (2) above, The Managing Director, Karnataka Renewable Energy Development Limited, Bangalore, has recommended for further enhancement of the wind power capacity from 41.25 M.W. to 42.5 M.W. in favour of M/s Suzlon Energy Limited at Sogi Bellary District.

3. Hence, the following Order

**Government Order No : DE 415 NCE 2004, Bangalore, Dated : 20th December 2004**

3. In the circumstances explained in the preamble, and after careful consideration Government are pleased to enhance the wind power capacity from 41.25 M.W. to 42.5 M.W. in favour of M/s Suzlon Energy Limited, at Sogi, Bellary District as detailed below:-

| Government Order | Site with capacity enhanced in the Ist stage | Site with capacity enhanced in the IIst stage | Site with capacity enhanced in the IIIrd stage | Total capacity after enhancement in (M.W.) |
|---|---|---|---|---|
| DE 137 NCE 2001, Bangalore, dated:19.9.2001 DE 325 NCE 2002, Bangalore, dated : 21.12.2002 | Sogi 30 M.W. | 41.25 M.W. | 1.25 M.W. (1250 kw) | 42.5 M.W. |

4. The other terms and conditions of the original Government Order read at 1 above are **IPSOFACTO** applicable.

By Order and in the name of the Governor of Karnataka,

P.R. 90

**K.L. JAYARAM**

Under Secretary to Government, Energy Department

**Sub:** Cancellation of the permission given to M/s Penguin Power Limited to set up 6 MW biomass based Power Project at Belagola village, Srirangapatna Taluk, Mandya District.

**Read:**
1. Govt. Letter No. DE 135 NCE 2001 dated 27.9.2001.
2. Letter No : KRED / 03 / SIS / 04 / 2096, dated : 22.11.2004 of the Managing Director, KREDL.
3. Show Cause Notice No. EN 213 NCE 2003 dated 1.12.2004.

**Preamble:-**

In the Government letter dated 27.9.2001 cited (1) above, M/s Penguin Power Limited was given in principal clearance for setting up of 6 MW biomass based Power Project at Belagola village, Srirangapatna Taluk, Mandya District.

2. The Managing Director, Karnataka Renewable Energy Development Limited in his letter dated 22.11.2004 cited (2) above has intimated that M/s Penguin Power Limited have not shown any progress in the implementation of the Project for the last 3 years. They have not applied for any statutory approvals though the Project has been accorded, No Objection Certificate 3 years back. He has therefore, recommended that the No Objection accorded to them may be cancelled.

3. Accordingly, in the Show Cause Notice dated 1.12.2004 cited (3) above M/s Penguin Power Limited was asked to show cause as to why the No Objection given for establishment of the 6 MW biomass based Power Project should not be cancelled for not implementing the Project. The Show Cause Notice has been returned by the postal Department as "left".

4. This proposal was examined and hence the order.

**Government Order No. EN 213 NCE 2003, Bangalore, Dated: 23rd December 2004**

5. In the circumstances explained in the preamble, Government hereby cancel the "No Objection" given to M/s Penguin Power Limited to set up 6 MW biomass based Power Project at Belagola village, Srirangapatna Taluk, Mandya District in Government letter No. DE 135 NCE 2001 dated 27.9.2001 with immediate effect.

By Order and in the name of the Governor of Karnataka,

**K.L. JAYARAM**

P.R. 91

Under Secretary to Government,

Energy Department

**Sub:** Allotment of 3 M.W. capacity Mini Hydel Project to M/s Vensai Power Projects Pvt. Ltd. - orders relating to.

**Read:**
1. Letter No : KRED / 06 / Nanniruhalla / 2004 / 1534, dated : 16.8.2004 received from the Managing Director, Karnataka Renewable Energy Development Limited, Bangalore.
2. Proceedings of the meeting of the allotment committee held on 23.8.2004.
3. Letter No. A1HOA1/MHS/IPP/642, dated 24.11.2004, received from the Managing Director, Karnataka Power Corporation Ltd. Bangalore.

**Preamble:-**

The Managing Director, Karnataka Renewable Energy Development Limited, Bangalore, has recommended to Government for allotment 3 M.W. capacity Mini Hydel Project across a stream Nanniruhalla a streamlet to river Sharavathi in Honnavara taluk, U.K. District to M/s Vensai Power Projects Private Ltd. vide his letter read at (1) above. The allotment committee meeting in its meeting held on 23.8.2004 has recommended the proposal subject to obtaining the consent of Karnataka Power Corporation Ltd. In the letter read at (3) above, the Managing Director, Karnataka Power Corporation Ltd. has given "No Objection" for this project. Hence, the following Order.

**Government Order No. EN 288 NCE 2004, Bangalore, Dated : 20th December 2004**

2. In the circumstances explained in the preamble and after careful consideration, Government are pleased to allot 3 M.W. capacity Mini Hydel Project across a stream Nanniruhalla a streamlet to river Sharavathi in Honnavara taluk, U.K. District to M/s Vensai Power Projects Private Ltd. (Latitude - 14-09'-21" (Weir) and 14-09'-38" (power house) & Longitude-74-42'52"E (Weir) and 74-43'50"E (power house), subject to the following conditions.

3 (a) The allottee shall execute an agreement with Government within three months from the date of the capacity allotment order failing which the allotment order shall become automatically lapsed. The company will have to apply denovo for capacity allocation there being no obligation on the part of the government to allot capacity and at the same site. There shall also be no refund of the application fee received by M/s Karnataka Renewable Energy Development Limited, Bangalore.

(b) Such an agreement on stamped paper shall be routed through the Managing Director, Karnataka Renewable Energy Development Limited, Bangalore, who shall certify as to its correctness after due scrutiny.

(c) Before executing the agreement the project developer shall deposit in advance with the M/s Karnataka Renewable Energy Development Limited, Bangalore, the detailed project report (DPR) proceessing fee at the rate of Rs. 25,000/- per MW subject to a minimum of Rs. 1.00 lakh.

4. (a) The project Developer shall obtain all statutory clearances from the respective authorities such as Water Resources Development Department. Karnataka power Transmission Corporation Limited. Karnataka State Pollution Control Board, Environment Department etc. Thereafter, he shall prepare and submit 3 copies of Detailed Project Report to the Managing Director, Karnataka Renewable Energy Development Limited, Bangalore to enable the later to issue technical clearance for the project. The time given for submission of detailed project report will be three years from the date of execution of agreement in case of new sites which have neither been investigated by the Government agency nor any flow data is available about the said site. Where flow data as well as other investigation data is available with Government agency about the site allotted, the allottee shall submit the detailed project report within one year from the date of the execution of the agreement.

(b) The deposit amount payable by the project allottee to Karnataka Renewable Energy Development Limited, Bangalore, shall be adjusted towards a detailed project report proceessing fee.

5. The allottee shall achieve financial closure within six months from the date of technical clearance for the detailed project report by Karnataka Renewable Energy Development Limited, Bangalore.
6. The allottee shall take action to complete the project implementation with 24 months from the date of achieving financial closure.
7. Failure to reach any of the project milestones specified in Sl.No. 2,3 & 4 in the same order would constitute sufficient grounds to result in automatic cancellation of allotment. No notice on this account will be given to the allottee.
8. The project Developer shall enter into a Wheeling and Banking Agreement with Karnataka Power Transmission Corporation Limited in case of selling power to the third party and power purchase agreement in case of selling power to Karnataka Power Transmission Corporation Limited.
9. The allottee company may seek full co-operation from the concerned officers of the Government at the District and State level to ensure speedy completion of the project.

By Order and in the name of the Governor of Karnataka,

P.R. 92

**K.L. JAYARAM**

Under Secretary to Government, Energy Department

## FINANCE SECRETARIAT

**Sub:** Conversion of Non-Banking Sub-Treasuries into Banking Sub-Treasuries.

**Read:** 1. Letter No.Khani:Prakriya:5:2002-03, dated:25-9-04 from the Director of Treasuries, Bangalore.

**Preamble:-**

The Director of Treasuries in his letter read above has stated that the State Bank of India, Bangalore vide letter No.BOD:SGK:CC:No.677, dated:28.8.04 has agreed for taking over the Government Transactions of Ron, Sub-Treasury, Gadag District and Reserve Bank of India, Bangalore vide letter No.BG:CY:No.893;03-04-01 B/2004-05, dated:9-9-04 has informed that the State Bank of India has agreed to take over the cash transaction of the Ron Sub-Treasury. Further Reserve Bank of India has asked the State Government to follow up this matter directly with the State Bank of India for taking further necessary action. The director of Treasuries, Bangalore has therefore requested for the orders of the Government to transfer the Government cash Transactions of Ron, Sub-Treasury to the local Branch of State Bank of India. This proposal has been examined by Government in detail. Hence the following order.

**Government Order No.FD 92 AAKHAYI 2002 (P-1), Bangalore, Dated: 17th December 2004**

Sanction is hereby accorded to the conversion of the Ron Sub-Treasury in Gadag District into Banking Treasury with cheque system and to transfer cash transactions of the Sub-Treasury to the local Branch of State Bank of India. The actual date of transfer of cash work to the Bank will be notified by the District Treasury officer, Gadag in consultation with the Bank authorities and the said date will hereafter be referred to as the 'appointed date'.

The special steps to be taken on the eve of conversion of the said Sub-Treasury into Banking Treasury and the classes of cash transactions to be taken over by the bank are detailed in Annexure 'A' to this order.

On and from the 'appointed date' the branch of the Agency Bank will conduct the cash business of sub-Treasury and render daily Accounts to the Sub-Treasury Officer Ron in the manner laid down in the rules in the Karnataka Treasury code and in the compilation of the Central Treasury rules.

For the conduct of transaction that will continue to be handled at the Sub-Treasury a cash imprest of Rs.200/- (Rs. Two Hundred only) is sanctioned to the Sub-Treasury. The amount may be drawn by the Sub-Treasury Officer, Ron from the Bank on a simple receipt. The expenditure out of the imprest should be recouped daily, the connected receipts if any being remitted to the bank and the amount paid being drawn from the Bank separately for each class of transaction. Should a demand be presented at the Sub-Treasury which cannot be met out of the balance of the cash imprest, the Sub-Treasury Officer Ron Treasury may draw the extra amount required from the bank on the payee's receipt indicating the purpose for which money is required and furnishing a pay order there on.

The normal cash balance fixed for the Sub-Treasury should be treated as withdrawn with effect from the appointed date, and the normal balance fixed for the respective District as a whole reduced correspondingly. The currency chest maintained at the Sub-Treasury shall be closed down and transferred to the bank in consultation with and as per the directions of the Reserve Bank of India.

The District and Sub-Treasury Officers should follow strictly any instructions that the Accountant General in Karnataka, Bangalore may issue in the matter.

The Police guards required for the Bank shall be provided by the Director General and Inspector General of Police in Karnataka, Bangalore under usual terms.

The District Treasury Officer, Gadag is requested to make adequate arrangements to effect the transfer on the appointed date under report to Government in the Finance Department as well as to the Director of Treasuries. He is also requested to see that the changes are effected smoothly and maximum convenience and guidance are afforded to other departments and the General Public in the first few days to obviate inconvenience to them.

The District Treasury Officer, Gadag is also requested to depute an experienced official in Banking Treasury work to the Sub-Treasury for about a week to enable the staff to become familiar with the new arrangements.

New forms and Registers required at the Sub-Treasury for immediate use should be spared from the District Treasury and an indent placed with the Director, Government Printing and Stationery for future supply.

By Order and in the name of the Governor of Karnataka,

**N. PRABHAKAR**

Under Secretary to Government,

Finance Department (Admn & Adv.)

**ANNEXURE-A**

1. The Cash Balance of the Sub-Treasury on the opening of the 'appointed date' should be remitted to the Bank on the same day upon a separate challan for credit to the head "Local Cash remittances" under advice to the Government in the Finance Department and the Accountant General.

2. The cash transactions connected with the following items of work will be conducted at the Sub-treasury itself as heretofore. The remitters of money or the payees, as the case may be, need not in such cases go to the Bank for their transactions:-

(a) Disbursement of Indian Military Pensions (on muster rolls)

(b) Transactions on account of receipts and payment under Savings Bank.

(c) Any other items of work to be specified by Government.

**N.B.** The amounts collected at the Sub-treasury should be remitted to the Bank daily under challans indicating the Head of account. Separate challans should be used for different major heads. Amounts disbursed from the permanent advance should be recouped from the Bank daily on simple payees' receipts furnishing classification similarly.

Amounts required for disbursement in excess of the balance of the permanent advance should be drawn from the Bank on simple payees' receipts, furnishing the heads of classification in the same way.

3. Pensioners will be paid their pension at the Bank on Cheques issued by the Sub-treasury Officer.

4. Taxes and fees on motor vehicles hitherto collected at the treasury will on and after the 'appointed date' be collected at the Bank direct. The licenses, etc., will be issued by the authorities concerned as usual on surrender of the challan receipted by the Bank and after verification of the credit for the taxes or fees paid in the Treasury Accounts.

5. General, Court fee, Postal and other Stamps including Postal Stationery will be issued at the treasury itself even after the 'appointed date'.

6. Cases, where remittances into and drawal from the Bank may be arranged directly without obtaining an authorization from the Treasury Officer are specified in Annexure 'B'. In other case, the documents on which money is presented or payment claimed at the Bank should have the authorisation of the Sub-Treasury officer. The challans or bills so authorised, if not presented to the Bank within ten days of their authorization require revalidation by the Treasury Officer.

7. The prescribed form of challan alone should be used for all remittances into the Bank. The forms will be supplied by the departmental officers / Sub-Treasury.

8. Cheques on Banks received by Government Officers in payments of Central or State Government dues or in settlement of transactions should be remitted to the Bank direct. Such cheques should be endorsed in favour of the Bank in all cases. Form K.F.C. 2 (Bank) itself may be used as challan in such cases. Pending realisation of the amounts thereof a receipt or token for the cheque only will be given by the Bank in the first instance. The final receipt will be delivered to the parties by the Bank soon after the cheques are cleared.

There will be a daily clearance of cheques accepted and the transactions will be included in the daily account rendered to the Sub-Treasury after the cheques have been cleared.

**Note:-** The Bank reserved to itself the right to refuse to accept cheque, the collection of which in its opinion, cannot reasonably be undertaken and which it could not accept on behalf of its own constituents.

9. Cheques drawn by Government Officers for drawing funds from the Bank should be addressed to the Bank and not to the Sub-Treasury Officer. Such cheques are negotiable. Until new cheque forms are printed, the required correction may be made in the existing forms in manuscript or rubber stamp. Such alterations do not require attestation. Cheque books will not be supplied by the Bank. They will be supplied by the Sub-Treasury, as at present.

**Note:-** Cheques issued by such officers on the Sub-Treasuries previously and remaining unpaid on the 'appointed date' will be cashed at the Bank direct subject to the rules of currency etc., The information required by the Bank in this behalf will be furnished by the Sub-Treasury as indicate at para 10 infra.

10. The Sub-Treasury Officer will arrange to forward to the Bank one week in advance of the 'appointed date' the specimen signature of the Government Officers authorized to operate on the P.D. and other accounts at the Sub-Treasury, copies of standing instructions, if any, in the assignment, drawing P.D. Accounts, together with the correspondence pertaining to stopped cheques, etc., should also be forwarded to the Bank on or before the 'appointed date'.

11. All Officers drawing cheques on the Bank should furnish to the Bank on the 'appointed date' a list of their cheques issued prior to the 'appointed date' and outstanding payment on that date by obtaining the necessary information from the Sub-Treasury.

12. Monthly pay bills of Government officers and officers should be presented at the Sub-Treasury for scrutiny three days in advance invariable as prescribed in Article 80, of Karnataka Financial code, 1958. Cheques will be issued for such pay bills in the Sub-Treasury and will be delivered on last working day.

**ANNEXURE-B**

Transactions in respect of which the challans cheques or refund orders need not pass through the sub-treasury officers before presentation at the Bank.

**Payments into the Banks**

1. Remittances of Sales-tax in the Special forms prescribed.
2. - do - Forest revenue.
3. - do - Civil and Criminal Courts Deposits.
4. - do - Fees, Fines, etc., Criminal Courts.
5. - do - Food Depots.
6. - do - Income tax revenue.
7. - do - Union Excise Duties
8. - do - Life Insurance Premia relating to Govt.Insurance Dept.
9. - do - into Personal Deposit Accounts kept at the Bank.
10. - do - of other items of challans which have been signed or attested by the Departmental Officer on whose behalf the moneys are credited.

11. - do - of amounts on special printed forms of challans.
12. - do - of Land Revenue, Muzarai and Village Panchayat.

**Drawal from the Bank**

1. Cheques drawn by Government Officers on Personal Deposit Accounts kept at the Bank.
2. Cheques drawn by the Officers of the Judicial Deptt. Against Personal Ledger Accounts.
3. Cheques drawn by Public Works Department.
4. Cheques drawn by Forest Department.
5. Cheques drawn by Government Commercial Undertakings.
6. Cheques drawn by Government Insurance Department.
7. Cheques drawn by the Chief Accounts Officer, Mysore State Electricity Board.
8. Cheques drawn by the Bursar, Mysore University.
9. Refund Orders of the Income tax Department.
10. Cheques drawn by Postal Department.
11. Cheques drawn by Defence Department.
12. Refund Orders of the Sales tax Department.

**N. PRABHAKAR**

P.R. 93 Under Secretary to Government, Finance Department (Admn & Adv.)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಶ್ರೀ ಕೆ. ತೀರ್ಥಪ್ಪ, ಹಿಂದಿನ ಉಪ ನಿರ್ದೇಶಕರು (ಖಾಗ್ರಾ), ಜಿಲ್ಲಾ ಪಂಚಾಯತ್ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಂಘ, ಬೆಂಗಳೂರು (ಗ್ರಾಮಾಂತರ) ಜಿಲ್ಲೆ, ಇವರನ್ನು ಆರೋಗ್ಯ ಇಲಾಖೆಗೆ ಕಳಪೆ ಮಟ್ಟದ ಬೆಂಚುಗಳನ್ನು ಸರಬರಾಜು ಮಾಡಿ ಅಕ್ರಮ ಎಸಗಿರುವ ಆರೋಪಗಳ ಮೇರೆಗೆ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ರವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಹೆಚ್‌ಎಫ್‌ಡಬ್ಲ್ಯೂ 219 ಎಂಎಸ್‌ಎ 2002, ದಿನಾಂಕ:9.12.2004
2. ಅಧಿಕ ನಿರ್ದೇಶಕರು (ಆಡಳಿತ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು, ರವರ ಪತ್ರದ ಸಂಖ್ಯೆ:ಕೈವಾ:ನಿರೀ:1:16:2004-05, ದಿನಾಂಕ:30.11.2004.
3. ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಲಾ ಅಂಡ್ ಆರ್ಡರ್), ಶೇಷಾದ್ರಿಪುರಂ, ಪೊಲೀಸ್ ಠಾಣೆ, ಬೆಂಗಳೂರು, ಇವರ ಪತ್ರ ದಿನಾಂಕ:20.11.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ಪತ್ರದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ರವರು ಶ್ರೀ ಕೆ. ತೀರ್ಥಪ್ಪ, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ರವರು ಈ ಹಿಂದೆ ಉಪ ನಿರ್ದೇಶಕರು (ಖಾಗ್ರಾ), ಜಿಲ್ಲಾ ಪಂಚಾಯತ್, ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಂಘ, ಬೆಂಗಳೂರು (ಗ್ರಾಮಾಂತರ) ಜಿಲ್ಲೆ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಭಾರತ ಜನಸಂಖ್ಯಾ ಯೋಜನೆಯಡಿ (ಐಪಿಪಿ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸದರಿ ಜಿಲ್ಲಾ ಸರಬರಾಜು ಮತ್ತು ಮಾರಾಟ ಸಂಘ, ಬೆಂಗಳೂರು ಗ್ರಾಮಾಂತರ ಜಿಲ್ಲೆ. ಈ ಸಂಸ್ಥೆಯ ಮುಖಾಂತರ ರೂ.28,66,000/- ವೆಚ್ಚದಲ್ಲಿ ಸರಬರಾಜು ಮಾಡಿದ 2000 ಸಾಗುವಾನಿ ಬೆಂಚುಗಳಿಗೆ ಸಂಬಂಧಿಸಿದಂತೆ, ಸದರಿ ಸಂಘದ ವ್ಯವಸ್ಥಾಪಕ ನಿರ್ದೇಶಕ ಶ್ರೀ ಕೆ. ತೀರ್ಥಪ್ಪರವರು ಸರಬರಾಜು ಕರಾರಿನ ನಿಬಂಧನೆಗಳನ್ನು ಉಲ್ಲಂಘಿಸಿ, ಸಾಗುವಾನಿ ಬೆಂಚುಗಳಿಗೆ ಬದಲಾಗಿ ಶೇಕಡಾ 90% ರಷ್ಟು ಪ್ರಮಾಣದಲ್ಲಿ ಕಾಡು ಮರದಿಂದ ತಯಾರಿಸಲಾದ (ಜಂಗಲ್) ಬೆಂಚುಗಳನ್ನು ಸರಬರಾಜು ಮಾಡಿಸಿ, ಸರಬರಾಜುದಾರ ಸಂಸ್ಥೆಗಳಿಗೆ ಹಣ ಪಾವತಿಸಿ ಸರ್ಕಾರಕ್ಕೆ ತೀವ್ರ ಆರ್ಥಿಕ ನಷ್ಟ ಉಂಟು ಮಾಡಿ ಸರ್ಕಾರಿ ನೌಕರರಿಗೆ ಸಲ್ಲದ ಮತ್ತು ಭಾರತ ದಂಡ ಸಂಹಿತೆ ಪ್ರಕಾರ ಶಿಕ್ಷಾರ್ಹ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ಮನವರಿಕೆಯಾಗಿರುವುದರಿಂದ ಶಿಸ್ತು ಕ್ರಮಕ್ಕೆ ಒಳಪಡಿಸುವುದರ ಜೊತೆಗೆ ಲಂಚ ನಿರೋಧಕ ಕಾಯ್ದೆ 1947ರನ್ವಯ ಇವರ ವಿರುದ್ಧ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ರವರು ದಿನಾಂಕ:11.12.2002ರ ಪತ್ರದಲ್ಲಿ ಕೋರಿರುವಂತೆ ಅನುಮತಿ ನೀಡುವಂತೆ ಕೋರಿರುತ್ತಾರೆ.

ಅಧಿಕ ನಿರ್ದೇಶಕರು (ಆಡಳಿತ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು, ರವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರನ್ವಯ ಬರೆದಿರುವ ಪತ್ರದಲ್ಲಿ ಶ್ರೀ ಕೆ. ತೀರ್ಥಪ್ಪ, ಉಪನಿರ್ದೇಶಕರು, ರವರು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸರಬರಾಜು ಮತ್ತು ಮಾರಾಟ ಸಂಘದ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸರಬರಾಜು ಮಾಡಿದ ಬೆಂಚುಗಳ ಅವ್ಯವಹಾರ ಪ್ರಕರಣಕ್ಕೆ ಸಂಬಂಧಿಸಿದಂತೆ ಸದರಿ ಇಲಾಖೆಯ ಯೋಜನಾ ನಿರ್ದೇಶಕರು ಬೆಂಗಳೂರಿನ ಶೇಷಾದ್ರಿಪುರಂ ಪೊಲೀಸ್ ಠಾಣೆಯಲ್ಲಿ ಫಿರ್ಯಾದಿಯನ್ನು ಸಲ್ಲಿಸಿರುವುದಾಗಿ ತಿಳಿಸಿ, ಅವರ ಕೋರಿಕೆಯಂತೆ ಶ್ರೀ ಕೆ. ತೀರ್ಥಪ್ಪ, ಇವರ ವಿರುದ್ಧ ಪೊಲೀಸ್ ಠಾಣೆಯಲ್ಲಿ ಪ್ರಕರಣ ದಾಖಲಾಗಿರುತ್ತದೆ. ಇದರಂತೆ ಇವರ ವಿರುದ್ಧ ನ್ಯಾಯಾಲಯದಲ್ಲಿ ಆರೋಪಣಾ ಪಟ್ಟಿ ಸಲ್ಲಿಸಬೇಕಾಗಿರುವುದರಿಂದ ಇವರನ್ನು ಅಭಿಯೋಜನೆಗೆ ಒಳಪಡಿಸಲು ಅನುಮತಿಯನ್ನು ನೀಡುವಂತೆ ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ವಾಕೈ 69 ಕೈಸೇವಿ 2002, ಬೆಂಗಳೂರು, ದಿನಾಂಕ: 10ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರೋಪಿಯಾದ ಶ್ರೀ ಕೆ. ತೀರ್ಥಪ್ಪ, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, (ಹಿಂದಿನ ಉಪ ನಿರ್ದೇಶಕರು (ಖಾಗ್ರಾ) ಜಿಲ್ಲಾ ಪಂಚಾಯತ್ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಂಘ, ಬೆಂಗಳೂರು ಗ್ರಾಮಾಂತರ ಜಿಲ್ಲೆ) ಇವರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 94 ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ಎ.ಸಿ.ಹಿರೇಮಠ್, ಕ್ಷೇತ್ರ ಶಿಕ್ಷಣಾಧಿಕಾರಿ, ಖಾನಾಪುರ ತಾ. ಬೆಳಗಾಂ ಜಿಲ್ಲೆ, (ಹಿಂದಿನ ಬಿಇ ಒ, ಗೋಕಾಕ್) ಇ ವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**

1. ಪೋಲೀಸ್ ಮಹಾ ನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇ ವರ ಪತ್ರ ಸಂ:ಲೋಕ್:ಐಎನ್‌ವಿ (ಜಿ):ಎಲ್-56:ಸಿಆರ್-21:96 ಬಿಜಿಎಂ ದಿ:15.2.97
2. ತನಿಖಾಧಿಕಾರಿಯ ವರದಿ ಸಂ:ಆನಿ.ಬಿಜಿಎಂ:ಕಲೋಕ:ಕೈ:ಬೆ:27:1996 ದಿನಾಂಕ:19.12.96
3. ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.
4. ಸರ್ಕಾರದ ಆದೇಶ ಸಂ:ಇ ಡಿ 156 ಡಿಜಿಡಿ 96 ದಿ:26.2.1997
5. ಪೋಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇ ವರ ಪತ್ರ ಸಂ:ಲೋಕ್:ತನಿಖೆ(ಜಿ):ಎಲ್-56:ಸಿಆರ್-21:96:ಬಿಜಿಎಂ, ದಿ:9.9.2004

**ಪ್ರಸ್ತಾವನೆ:-**

ಶ್ರೀ ಎ.ಸಿ.ಹಿರೇಮಠ್, ಕ್ಷೇತ್ರ ಶಿಕ್ಷಣಾಧಿಕಾರಿ, ಖಾನಾಪುರ ತಾಲ್ಲೂಕ್, ಬೆಳಗಾಂ ಜಿಲ್ಲೆ, (ಹಿಂದಿನ ಬಿಇ ಒ, ಗೋಕಾಕ್) ಇ ವರು ಈ ಹಿಂದೆ ಗೋಕಾಕ್ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಟ್ರ್ಯಾಪ್ ಪ್ರಕರಣದಲ್ಲಿ ಸಿಕ್ಕಿ ಬಿದ್ದಿದ್ದರಿಂದ ಮೇಲೆ ಓದಲಾದ ಕ್ರಮಾಂಕ (1) ರಲ್ಲಿನ ಶಿಫಾರಸ್ಸಿನ ಮೇರೆಗೆ ದಾಖಲೆಗಳನ್ನು ಪರಿಶೀಲಿಸಿದ ನಂತರ ಸರ್ಕಾರವು ಮೇಲೆ ಓದಲಾದ ಕ್ರಮಾಂಕ (4) ರ ದಿನಾಂಕ:26.2.1997 ರ ಸರ್ಕಾರಿ ಆದೇಶದ ಮೂಲಕ ಸದರಿಯವರ ವಿರುದ್ಧ ಅಧಿಕಾರ ವ್ಯಾಪ್ತಿಯುಳ್ಳ ನ್ಯಾಯಾಲಯದಲ್ಲಿ ಪ್ರಾಸಿಕ್ಯೂಷನ್ ಮೊಕದ್ದಮೆ ದಾಖಲಿಸಲು ಸರ್ಕಾರದ ಮಂಜೂರಾತಿ ಆದೇಶ ನೀಡಲಾಗಿತ್ತು.

2. ಶ್ರೀ ಎ.ಸಿ.ಹಿರೇಮಠ್, ಇ ವರ ಮೇಲೆ ಸರ್ಕಾರವು ಹೊರಡಿಸಿರುವ ಅಭಿಯೋಜನಾ ಮಂಜೂರಾತಿ ಆದೇಶದನ್ವಯ ಬೆಳಗಾವಿ ಜಿಲ್ಲಾ ಪ್ರಧಾನ ಸತ್ರ ನ್ಯಾಯಾಲಯದಲ್ಲಿ ದೋಷಾರೋಪಣಾ ಪಟ್ಟಿ ಸಲ್ಲಿಸಲಾಗಿತ್ತೆಂದು, ಸದರಿ ನ್ಯಾಯಾಲಯವು ಎಸ್.ಸಿ. ಸಂ:53:97 ರಲ್ಲಿ ವಿಚಾರಣೆ ನಡೆಸಿ, ಅಭಿಯೋಜನೆ ಹೂಡಲು ನೀಡಿದ ಆದೇಶವು ಕಾನೂನಿನಡಿಯಲ್ಲಿ ಸಮಂಜಸವಾಗಿರುವುದಿಲ್ಲವೆಂದು, ಅಭಿಯೋಜನೆಗೆ ಕಾನೂನಿನಡಿಯಲ್ಲಿ ಸಮಂಜಸವಾಗುವಂತೆ ಅಭಿಯೋಜನೆ ಹೂಡಲು ಆದೇಶವನ್ನು ಪಡೆದು ಹೊಸದಾಗಿ ಆಪಾದನಾ ಪಟ್ಟಿಯನ್ನು ಸಲ್ಲಿಸುವಂತೆ ಸೂಚನೆ ನೀಡಿ ಈ ಪ್ರಕರಣದ ವಿಚಾರಣೆಯನ್ನು ಕೈಬಿಟ್ಟು ದಿ:22.6.2004 ರಂದು ನ್ಯಾಯಾಲಯವು ತೀರ್ಪು ನೀಡಿರುವುದರಿಂದ, ಹೊಸದಾಗಿ ಅಭಿಯೋಜನೆ ಹೂಡಲು ಸರ್ಕಾರದ ಮಂಜೂರಾತಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಕ್ರಮಾಂಕ:(5) ದಿನಾಂಕ:9.9.2004 ರ ಪತ್ರದ ಮೂಲಕ ಕರ್ನಾಟಕ ಲೋಕಾಯುಕ್ತ ಕಛೇರಿಯ ಪೋಲೀಸ್ ಮಹಾನಿರೀಕ್ಷಕರು ಕೋರುತ್ತಾ ಆಪಾದಿತ ಸರ್ಕಾರಿ ನೌಕರರನ್ನು ಭ್ರಷ್ಟಾಚಾರ ನಿರ್ಮೂಲನ ಕಾಯಿದೆ 1988 ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988 ರ ಕಲಂ 19 ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಮತ್ತೆ ಮಂಜೂರಾತಿ ಆದೇಶವನ್ನು ನೀಡುವಂತೆ ಕೋರಿದ್ದಾರೆ.

3. ಆದ್ದರಿಂದ ದಿ:26.2.1997 ಸಂಖ್ಯೆ:ಇ ಡಿ 156 ಡಿಜಿಡಿ 96 ರ ಆದೇಶವನ್ನು ಹಿಂತೆಗೆದು ಕೊಂಡು, ಕೆಳಕಂಡಂತೆ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

4. ಶ್ರೀ ಎ.ಸಿ.ಹಿರೇಮಠ್, ಕ್ಷೇತ್ರ ಶಿಕ್ಷಣಾಧಿಕಾರಿ, ಖಾನಾಪುರ ತಾಲ್ಲೂಕ್, ಬೆಳಗಾಂ ಜಿಲ್ಲೆ, (ಹಿಂದಿನ ಬಿಇ ಒ, ಗೋಕಾಕ್) ಇ ವರ ವಿರುದ್ಧ ಗುನ್ನೆ ಸಂಖ್ಯೆ:21:1996 ರಲ್ಲಿ ಆರಕ್ಷಕ ನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಳಗಾವಿ, ಪೋಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಮೇಲೆ ಓದಲಾದ ಕ್ರ.ಸಂ.(2) ಮತ್ತು (3) ರಲ್ಲಿರುವುದನ್ನು ಪೋಲೀಸ್ ಮಹಾನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇ ವರು ಮೇಲೆ ಓದಲಾದ ಕ್ರಮಾಂಕ (1) ಮತ್ತು(5)ರಲ್ಲಿನ ಪತ್ರದೊಂದಿಗೆ ಕಳುಹಿಸುತ್ತಾ ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯಿದೆ, 1988 ರ 19 ನೆಯ, ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

5. ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಪೋಲೀಸ್ ಮಹಾನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇ ವರು ಮೇಲೆ ಓದಲಾದ ಕ್ರಮಾಂಕ (1)ರ ಪತ್ರ ಸಂಖ್ಯೆ:ಲೋಕ್:ಐಎನ್‌ವಿ(ಜಿ):ಎಲ್.56:ಸಿಆರ್-21:96.ಬಿಜಿಎಂ ದಿನಾಂಕ: 15.2.1997 ಹಾಗೂ ದಿ.9.9.2004ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

(ಅ) ಶ್ರೀ ಸುಭಾಷ್‌ಚಂದ್ರ, ಟೀಕಾಸಾ ವಾಳ್ವೇಕರ, ಶಿಕ್ಷಕರು, ಸಾ:ಮಮದಾಪೂರ, ಕ.ಗಂ.ಶಾಲೆ, ಮಮದಾಪೂರ, ಇ ವರ ಫಿರ‍್ಯಾದು ದಿನಾಂಕ: 19.07.1996

(ಆ) ಪ್ರಥಮ ವರ್ತಮಾನ ವರದಿ, ಆರಕ್ಷಕರ ನಿರೀಕ್ಷಕರು, ಅರಕ್ಷಕ ನಿರೀಕ್ಷಕರ ಕಚೇರಿ, ತನಿಖಾ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಳಗಾವಿ, ಪ್ರಕರಣ ಸಂಖ್ಯೆ:ಅನಿ: ಜಿಜಿಎಂ:ಕಲೋಕ:ಕೈ:ಬೆ:27:1996 ದಿನಾಂಕ:19.12.96

(ಇ ) ಪ್ರಾಯೋಗಿಕ ಪಂಚನಾಮೆ ದಿನಾಂಕ:19.7.1996

(ಈ) ಟ್ರ್ಯಾಪ್ ಮಹಾಜರ್ ದಿನಾಂಕ:19.07.1996

(ಉ) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ ಸಿಎಸ್.532(ಎಲ್)/96,ದಿನಾಂಕ5.9.96

(ಊ) ಕೃತ್ಯ ನಡೆದ ಸ್ಥಳದ ನಕಾಶೆ

(ಋ) ಸಾಕ್ಷಿಗಳ ಹೇಳಿಕೆಗಳು:

(1) ಶ್ರೀ ಆನಂದ ಸುರೇಶ ಜಂಬಾಳೆ, ವಯಸ್ಸು 25 ವರ್ಷ, ಉದ್ಯೋಗ ದ್ವಿದಸ, ಉಪವಿಭಾಗಾಧಿಕಾರಿಯವರ ಕಚೇರಿ, (ಪಂಚ) ಬೆಳಗಾವಿ,

(2) ಶ್ರೀ ಬೋಜರಾಜ ತವನಪ್ಪಾ ಪಾಟೀಲ್, ವಯಸ್ಸು 23 ವರ್ಷ ಉದ್ಯೋಗ ದ್ವಿದಸ, ಜಿಲ್ಲಾ ಖಜಾನೆ, ಬೆಳಗಾವಿ (ಪಂಚ)

(3) ಶ್ರೀ ಸುಭಾಷಚಂದ್ರ ಟಿಕಾಸೋ ವಾಳ್ವೇಕರ್, ವಯಸ್ಸು 43 ವರ್ಷ, ಉದ್ಯೋಗ ಸಹಾಯಕ ಶಿಕ್ಷಕರು, ಕ.ಗಂ.ಶಾಲೆ, ಮಮದಾಪೂರ, ತಾಲ್ಲೂಕು ಗೋಕಾಕ, (ಫಿರ್ಯಾದಿ)

(4) ಶ್ರೀ ಬಿ.ಐ.ದೇವಡಿ, ಮುಖ್ಯ ಆರಕ್ಷಕರ ಲೋಕಾಯುಕ್ತ ಠಾಣೆ, ಬೆಳಗಾವಿ,

(5) ಶ್ರೀ ಬಿ.ಬಿ.ಸೊಲ್ಲಾಪೂರ, ಅರಕ್ಷಕ ಲೋಕಾಯುಕ್ತ, ಬೆಳಗಾವಿ,

(6) ಶ್ರೀ ಎಸ್.ಹೆಚ್.ಬಜಂತ್ರಿ, ಅರಕ್ಷಕರ ಲೋಕಾಯುಕ್ತ, ಬೆಳಗಾವಿ,

(7) ಶ್ರೀ ಎಂ.ಎಫ್.ಬಾವಿಹಾಳ, ಅರಕ್ಷಕ ಲೋಕಾಯುಕ್ತ, ಬೆಳಗಾವಿ,

(8) ಶ್ರೀ ವಿ.ಪಿ.ಪವಾರ್, ಅರಕ್ಷಕ ಲೋಕಾಯುಕ್ತ, ಬೆಳಗಾವಿ,

(ಎ) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ:ಸಿಸಿವಿಸಿ ಪರೀಕ್ಷೆಗೆ ಸಂಬಂಧಿಸಿದ ಪರೀಕ್ಷಾ ಸೀಟ್ ನಂ:241816, ಹಾ.ನಂ:218

(ಏ) ಆಪಾದಿತರ ಸಮಜಾಯಿಷಿ ಹೇಳಿಕೆ

6. ತನಿಖಾಧಿಕಾರಿಗಳಾದ ಶ್ರೀ ಎಸ್.ಎಫ್.ಕಂಬಾರ, ಅರಕ್ಷಕ ನಿರೀಕ್ಷಕರು, ಬಿಒಐ, ಲೋಕಾಯುಕ್ತ ಬೆಳಗಾವಿ, ಇ ವರು ಶ್ರೀ ಎ.ಸಿ.ಹಿರೇಮಠ್, ಕ್ಷೇತ್ರ ಶಿಕ್ಷಣಾಧಿಕಾರಿ, ಖಾನಾಪೂರ ತಾಲ್ಲೂಕ್, (ಹಿಂದಿನ ಬಿಇ ಒ, ಗೋಕಾಕ್ ತಾಲ್ಲೂಕ್) ಇ ವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಬೆಳಗಾವಿ ಲೋಕಾಯುಕ್ತ ಅರಕ್ಷಕ ಠಾಣೆಯಲ್ಲಿ ಗುನ್ನೆ ಸಂಖ್ಯೆ:21:1996 ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988 ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2) ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

7. ಆಪಾದಿತರಾದ ಶ್ರೀ ಎ.ಸಿ.ಹಿರೇಮಠ್, ಬಿಇ ಒ, ಖಾನಾಪುರ, (ಹಿಂದಿನ ಬಿಇ ಒ, ಗೋಕಾಕ) ಫಿರ್ಯಾದಿಯಾದ ಶ್ರೀ ಸುಭಾಷಚಂದ್ರ ಟಿಕಾಸ, ವಾಳ್ವೇಕರ, ಶಿಕ್ಷಕರು ಸಾ:ಮಮದಾಪೂರ, ಕಗಂ ಶಾಲೆ, ಮಮದಾಪೂರ, ಇ ವರ ಸಿಸಿವಿಸಿ ಅಂಕಪಟ್ಟಿಯ ಮೇಲೆ ಮೇಲು ರುಜು ಮಾಡಿಕೊಡಲು ಆಪಾದಿತ ಅಧಿಕಾರಿ ಫಿರ್ಯಾದಿದಾರರಿಂದ ಸರ್ಕಾರಿ ಕೆಲಸವನ್ನು ಮಾಡಲು ರೂ.1,000/-ಗಳ ಅಕ್ರಮ ಸಂಭಾವನೆಯನ್ನು ಒತ್ತಾಯಿಸಿರುತ್ತಾರೆಂದು, ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇ ರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ:19.07.1996 ರಂದು ಸಮಯ:17.30 ಗಂಟೆಗೆ ಮಹಾಲಕ್ಷ್ಮೀ ಬಡಾವಣೆ, ಆಪಾದಿತರ ಮನೆ ಬಸವನಗರ, ಗೋಕಾಕ್, ಫ್ಲಾಟ್ ನಂ:13 ರಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಎ.ಸಿ.ಹಿರೇಮಠ್, ಹಿಂದಿನ ಬಿಇ ಒ, ಗೋಕಾಕ, ಇ ವರು ಅಕ್ರಮ ಸಂಭಾವನೆಯಾದ 1000/- ರೂ.ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆಂದು, ಆಪಾದಿತ ಸರ್ಕಾರಿ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳಚ್ಚುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆಂದು, ನೆರಳು ಸಾಕ್ಷಿಯೂ ಸಹ ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆಂದು ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆಂದು, ಅಕ್ರಮ ಸಂಭಾವನೆಯಾದ ರೂ.1000/- ಗಳನ್ನು ಶ್ರೀ ಎ.ಸಿ.ಹಿರೇಮಠ್, ಬಿಇ ಒ, ಖಾನಾಪುರ, ಹಿಂದಿನ ಬಿಇ ಒ, ಗೋಕಾಕ, ಇ ವರಿಂದ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ ಎಂದು ಮೇಲೆ ಓದಲಾದ ಕ್ರಮಾಂಕ (2) ರ ದಿನಾಂಕ19.12.1996 ರ ತನಿಖಾ ವರದಿಯಿಂದ ಕಂಡುಬಂದಿದೆ.

8. ಅದರಂತೆ, ಈ ಪ್ರಕರಣಕ್ಕೆ ಸಂಬಂಧಿಸಿದ ತನಿಖಾ ದಾಖಲಾತಿಗಳಾದ ಪ್ರಥಮ ವರ್ತಮಾನ ವರದಿ, ಟ್ರ್ಯಾಪ್ ಪೂರ್ವದ ಮಹಜರ್ ಮತ್ತು ಟ್ರ್ಯಾಪ್‌ನ ನಡವಳಿಗಳು, ಸಾಕ್ಷಿಗಳ ಹೇಳಿಕೆಗಳು, ರಾಸಾಯನಿಕ ಪರೀಕ್ಷಕರ ವರದಿ, ಟ್ರ್ಯಾಪ್ ಸ್ಥಳದ ನಕ್ಷೆ ಮತ್ತು ತನಿಖಾಧಿಕಾರಿಯ ಅಂತಿಮ ವರದಿಗಳು ಆಪಾದಿತ ಸರ್ಕಾರಿ ಅಧಿಕಾರಿಯವರ ವಿರುದ್ಧ ಇ ರುವ ಆಪಾದನೆಗಳನ್ನು ಸಮರ್ಥಿಸಲು ನಿರ್ಣಾಯಕ ಸಾಕ್ಷ್ಯಗಳಾಗಿದ್ದು ಅವುಗಳ ಪರಿಶೀಲನೆಯು ಅದರ ವಿರುದ್ಧ ಪ್ರಕರಣದ ಅಸ್ತಿತ್ವವನ್ನು ಮೇಲುನೋಟಕ್ಕೆ ಸೂಚಿಸುತ್ತದೆ. ದಾಖಲಾತಿಗಳಲ್ಲಿನ ಸಾಕ್ಷ್ಯ ಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಆಪಾದಿತ ಸರ್ಕಾರಿ ಅಧಿಕಾರಿ ಶ್ರೀ ಎ.ಸಿ.ಹಿರೇಮಠ್, ಬಿಇ ಒ, ಖಾನಾಪುರ, (ಹಿಂದಿನ ಬಿಇ ಒ, ಗೋಕಾಕ) ಇ ವರು ಫಿರ್ಯಾದಿದಾರರಿಗೆ ಸಿಸಿವಿಸಿ ಅಂಕಪಟ್ಟಿಯ ಮೇಲೆ ಮೇಲು ರುಜು ಮಾಡಿಕೊಡಲು ರೂ.1000/-ಗಳನ್ನು ಅಕ್ರಮ ಸಂಭಾವನೆಯಾಗಿ ಕೇಳಿದ್ದು, ಈ ಹಣವನ್ನು ಆಪಾದಿತರಾದ ಶ್ರೀ ಎ.ಸಿ.ಹಿರೇಮಠ್, ಬಿಇ ಒ, ಖಾನಾಪುರ, ಹಿಂದಿನ ಬಿಇ ಒ, ಗೋಕಾಕ, ಇ ವರು ದಿನಾಂಕ:19.07.1996 ರಂದು ಪಡೆಯುತ್ತಿದ್ದಾಗ ಟ್ರ್ಯಾಪ್ ಆಗಿದ್ದು, ಇ ವರು ಫಿರ್ಯಾದಿದಾರರಿಂದ ಕೇಳಿ ಸ್ವೀಕರಿಸಿದ್ದು, ಶ್ರೀ ಎ.ಸಿ.ಹಿರೇಮಠ್, ಬಿಇ ಒ, ಖಾನಾಪುರ, ಹಿಂದಿನ ಬಿಇ ಒ, ಗೋಕಾಕ, ಇ ವರು ಲಂಚ ನಿರೋಧಕ ಕಾಯ್ದೆ, 1988ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿ ರುವುದು ಸರ್ಕಾರಕ್ಕೆ ಸಂಪೂರ್ಣ ಮನವರಿಕೆಯಾಗಿದ್ದು, ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎ.ಸಿ.ಹಿರೇಮಠ್, ಇ ವರನ್ನು ಲಂಚ ನಿರೋಧಕ ಕಾಯಿದೆ, 1988ರ ಕಲಂ 7,13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಅಭಿಯೋಜಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇ ಡಿ 156 ಡಿಜಿಡಿ 96, ಬೆಂಗಳೂರು, ದಿನಾಂಕ: 01ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ದಿನಾಂಕ 26.02.1997 ರ ಆದೇಶ ಸಂಖ್ಯೆ ಇ ಡಿ 156 ಡಿಜಿಡಿ 96 ನ್ನು ಹಿಂತೆಗೆದುಕೊಂಡು,ಲಂಚ ನಿರೋಧಕ ಕಾಯಿದೆ 1988 ರ ಕಲಂ 19(ಬಿ)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರದಡಿ ಸರ್ಕಾರವು ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎ.ಸಿ.ಹಿರೇಮಠ್, ಬಿಇ ಒ, ಖಾನಾಪುರ, (ಹಿಂದಿನ ಬಿಇ ಒ, ಗೋಕಾಕ) ಇ ವರನ್ನು ಲಂಚ ನಿರೋಧಕ ಕಾಯಿದೆ 1988ರ ಕಲಂ 7, 13(1)(ಡಿ)ರ ಜೊತೆ ಓದಲಾದ 13(2)ರ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಈ ಮೂಲಕ ಆದೇಶಿಸಿದೆ.

"ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977 ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಹೊರಡಿಸಬೇಕು" ಹಾಗೂ ಅದೇ ನಿಯಮಾವಳಿಯ ನಿಯಮ 19(1)ರ ಪ್ರಕಾರ "ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿರುವ ಆದೇಶಗಳು ಮತ್ತು ಲೇಖನಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು." ಹಾಗೂ ಅಂತಹ ಸಹಿಯು, ಅಂತಹ ಆದೇಶವನ್ನು ಅಧಿಕೃತಗೊಳಿಸುತ್ತದೆ. "ಕರ್ನಾಟಕ ಸರ್ಕಾರ (ವ್ಯವಹಾರ) ನಿಯಮಾವಳಿಗಳು 1997ರ ಪ್ರಕಾರ ಈ ಮೇಲ್ಕಂಡ ಆದೇಶವನ್ನು ನನ್ನ ಕಚೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ಎರಡು ಸಾವಿರದ ಐದನೇ ಇ ಸವಿಯ ಜನವರಿ ತಿಂಗಳು ಒಂದನೇ ದಿನಾಂಕದಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 95

**ಎಫ್.ಆರ್.ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ.(ಸೇ-1,2)

**ವಿಷಯ:** ಶ್ರೀ ಬಸಣ್ಣ ಮಹಂತೇಗೌಡ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ, ಶ್ರೀ ವಿ.ಎಸ್. ಗಾಯಕ್‌ವಾಡ್, ವ್ಯವಸ್ಥಾಪಕರು, ಬಿಇಒ ಕಚೇರಿ, ಚಿತ್ತಾಪುರ ಹಾಗೂ ಶ್ರೀ ಚಿದಾನಂದ, ಪ್ರಥಮ ದರ್ಜೆ ಸಹಾಯಕರು, ಬಿಇಒ ಕಚೇರಿ, ಯಾದಗಿರಿ, ಇವರುಗಳ ಮೇಲಿನ ಆರೋಪಗಳಿಗೆ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14-ಎ ಮೇರೆಗೆ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರವರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಅರೆಸರ್ಕಾರಿ ಪತ್ರ ಸಂ:COMPT:UPLOK:GLB-106:98-99, ದಿನಾಂಕ:8.11.2004.

**ಪ್ರಸ್ತಾವನೆ:**

ಶ್ರೀ ಬಸಣ್ಣ ಮಹಂತೇಗೌಡ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ, ಶ್ರೀ ವಿ.ಎಸ್. ಗಾಯಕ್‌ವಾಡ್, ವ್ಯವಸ್ಥಾಪಕರು, ಬಿಇಒ ಕಚೇರಿ, ಚಿತ್ತಾಪುರ ಹಾಗೂ ಶ್ರೀ ಚಿದಾನಂದ, ಪ್ರಥಮ ದರ್ಜೆ ಸಹಾಯಕರು, ಬಿಇಒ ಕಚೇರಿ, ಯಾದಗಿರಿ, ಇವರುಗಳ ಮೇಲಿನ ಆರೋಪಗಳಿಗೆ ಕರ್ನಾಟಕ ಲೋಕಾಯುಕ್ತ ಅಧಿನಿಯಮ 12(3) ರಡಿಯಲ್ಲಿ ಮಾನ್ಯ ಲೋಕಾಯುಕ್ತರವರ ತನಿಖಾ ವರದಿ ಸಂ:COMPT:UPLOK:GLB-106:98-99:ARE-1(99) ದಿನಾಂಕ:5.11.2004 ನ್ನು ಲೋಕಾಯುಕ್ತದ ನಿಬಂಧಕರು ಮೇಲೆ ಓದಲಾದ ದಿನಾಂಕ:8.11.2004 ರಂದು ಸರ್ಕಾರಕ್ಕೆ ಸಲ್ಲಿಸಿ ಲೋಕಾಯುಕ್ತ ಅಧಿನಿಯಮ 12(4)ರಲ್ಲಿ ನಿರ್ದಿಷ್ಟಪಡಿಸಿರುವಂತೆ ಸರ್ಕಾರದ ನಿರ್ಣಯವನ್ನು 3 ತಿಂಗಳೊಳಗಾಗಿ ತಿಳಿಸುವಂತೆ ಕೋರಿರುತ್ತಾರೆ.

ಮಾನ್ಯ ಲೋಕಾಯುಕ್ತರವರ ದಿನಾಂಕ:5.11.2004ರ ತನಿಖಾ ವರದಿಯಲ್ಲಿ ಶ್ರೀ ಯಂಕಪ್ಪ, ಸಹಶಿಕ್ಷಕರು, GHPS ಮಿನಾಸ್ಪುರ್, ಯಾದಗಿರಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಹಿಂದಿನ ಸಹಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಗೋನಾಳ, ಸುರಪುರ ತಾಲ್ಲೂಕ್, ಇವರಿಗೆ ಸಂಬಂಧಿಸಿದಂತೆ 1993 ರಿಂದ 1997 ರವರೆಗೆ ಹೆಚ್ಚುವರಿ ತುಟ್ಟಿಭತ್ಯೆಯನ್ನು ಅವರ ವೇತನದಿಂದ ಖಟಾವು ಮಾಡಿ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರವನ್ನು ಖರೀದಿಸದೆ ಹಣ ದುರುಪಯೋಗ ಮಾಡಿದ್ದಾರೆಂದು ಕರ್ನಾಟಕ ಲೋಕಾಯುಕ್ತಕ್ಕೆ ದೂರನ್ನು ಸಲ್ಲಿಸಿದ್ದರೆಂದು ದೂರಿನ ಮೇಲೆ ಗುಲ್ಬರ್ಗಾ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖಾ ಉಪನಿರ್ದೇಶಕರ ವರದಿಯನ್ನು ಪಡೆದಿದ್ದು, ಸದರಿ ವರದಿಯಲ್ಲಿ ದಿನಾಂಕ:2.8.1993 ರಿಂದ 31.10.1995 ರವರೆಗೆ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಕ್ಕೆಂದು ಸುರಪುರ ತಾಲ್ಲೂಕಿನ ಎಲ್ಲಾ ಶಿಕ್ಷಕರುಗಳಿಂದ ಡ್ರಾಯಿಂಗ್ ಅಧಿಕಾರಿಯಾದ ಬಿಇಒ ರವರು ಕಟಾಯಿಸಿದ್ದು, ಆದರೆ ಎನ್.ಎಸ್.ಸಿ.ಯನ್ನು ತಕ್ಷಣವೇ ಖರೀದಿಸಿಲ್ಲವೆಂದು ತಿಳಿಸಿದ್ದಾರೆಂದು ವೇತನದಿಂದ ಕಟಾಯಿಸಿದ ನಂತರ ದಿನಾಂಕ:2.8.1993 ರಿಂದ 31.10.1993 ರವರೆಗೆ ಖಟಾಯಿಸಿದ ಮೊತ್ತಕ್ಕೆ 3 ವರ್ಷದ ನಂತರ ಎನ್.ಎಸ್.ಸಿ ಖರೀದಿಸಲಾಗಿದೆ ಎಂದು ಹಾಗೂ ದಿ:1.1.1994 ರಿಂದ 30.4.94 ರವರೆಗೆ ವೇತನದಿಂದ ಖಟಾಯಿಸಿದ ಮೊತ್ತಕ್ಕೆ ಎನ್.ಎಸ್.ಸಿ. ಯನ್ನು ಸುಮಾರು 2 ವರ್ಷದ ನಂತರ ಖರೀದಿಸಿದ್ದಾರೆಂದು ವರದಿ ಮಾಡಿದ್ದು, ಇದಕ್ಕೆ ಕಾರಣರಾದ ಅಧಿಕಾರಿ:ನೌಕರರನ್ನು ಗುರ್ತಿಸಿ ಲೋಕಾಯುಕ್ತಕ್ಕೆ ವರದಿ ಸಲ್ಲಿಸಿದ್ದಾರೆಂದು ತಿಳಿಸಿದ್ದಾರೆ.

ಮುಂದುವರೆದು ತನಿಖಾ ವರದಿಯಲ್ಲಿ ಎನ್.ಎಸ್.ಸಿ. ಖರೀದಿಸಲು ವಿಳಂಬಕ್ಕೆ ಕಾರಣರಾದ ಶ್ರೀ ಬಸಣ್ಣ ಮಹಂತೇಗೌಡರ್, ಹಿಂದಿನ ಬಿಇಒ, ಸುರಪುರ ತಾಲ್ಲೂಕ್, ಶ್ರೀ ಗಾಯಕವಾಡ ಹಾಗೂ ಶ್ರೀ ಚಿದಾನಂದ ಇವರುಗಳಿಗೆ ಲೋಕಾಯುಕ್ತ ಕಚೇರಿಯಿಂದ ನೋಟೀಸ್ ಜಾರಿಮಾಡಿದಾಗ ಅವರುಗಳು ದೂರನ್ನು ಅಲ್ಲಗಳೆದಿದ್ದಾರೆಂದು, ಇವರುಗಳು ನೋಟೀಸಿಗೆ ನೀಡಿರುವ ಹೇಳಿಕೆಯಲ್ಲಿನ ಅಂಶಗಳನ್ನು ಗುಲ್ಬರ್ಗಾ ಉಪನಿರ್ದೇಶಕರು ಸಲ್ಲಿಸಿದ ವರದಿಯಲ್ಲಿನ ಅಂಶಗಳನ್ನು ಹಾಗೂ ದಾಖಲಾತಿಗಳನ್ನು ಪರಿಶೀಲಿಸಿದ ನಂತರ ಈ ಮೂರು ಅಧಿಕಾರಿ ನೌಕರರು ಕರ್ತವ್ಯ ಲೋಪ, ಹಣಕಾಸಿನ ನಿಯಮಗಳ ಉಲ್ಲಂಘನೆ ಹಾಗೂ ಶಿಕ್ಷಕರುಗಳಿಗೆ ಆರ್ಥಿಕ ನಷ್ಟವುಂಟಾಗಲು ಕಾರಣರಾಗಿದ್ದು, ಇದರಿಂದಾಗಿ ಇವರುಗಳು ಸರ್ಕಾರಿ ನೌಕರರಲ್ಲದ ರೀತಿಯಲ್ಲಿ ವರ್ತಿಸಿರುವ ಮೂಲಕ ಶಿಸ್ತು ಕ್ರಮಕ್ಕೆ ಬದ್ಧರಾಗಿದ್ದಾರೆಂದು ತಿಳಿಸಿದ್ದಾರೆ. ಹಾಗೂ ಸದರಿಯವರ ವಿರುದ್ಧ ಕಠಿಣ ದಂಡನೆ ವಿಧಿಸಲು ಅನುಸರಿಸಲಾದ ನಿಯಮಗಳಡಿಯಲ್ಲಿ ಸಿಸಿಎ ನಿಯಮ 14-ಎ ಮೇರೆಗೆ ವಿಚಾರಣೆ ನಡೆಸಲು ಆದೇಶ ಹೊರಡಿಸುವಂತೆ ಶಿಫಾರಸ್ಸು ಮಾಡಿದ್ದಾರೆ.

ಮಾನ್ಯ ಲೋಕಾಯುಕ್ತರವರ ತನಿಖಾ ವರದಿಯಲ್ಲಿನ ಅಂಶಗಳನ್ನು ಸರ್ಕಾರವು ಒಪ್ಪಿದೆ. ಹಾಗೂ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 159 ಡಿಜಿಡಿ 2004, ಬೆಂಗಳೂರು, ದಿನಾಂಕ: 10ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14-ಎ ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕೆಳಕಂಡ ಅಧಿಕಾರಿ ನೌಕರರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರವರಿಗೆ ವಹಿಸಿ ಆದೇಶಿಸಿದೆ.

**ಆಪಾದಿತ ಅಧಿಕಾರಿ ನೌಕರರ ಹೆಸರು:**

1. ಶ್ರೀ ಬಸಣ್ಣ ಮಹಂತೇಗೌಡ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ.
2. ಶ್ರೀ ವಿ.ಎಸ್. ಗಾಯಕ್‌ವಾಡ್, ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಚೇರಿ, ಚಿತ್ತಾಪುರ, ಗುಲ್ಬರ್ಗಾ ಜಿಲ್ಲೆ.
3. ಶ್ರೀ ಚಿದಾನಂದ, ಪ್ರಥಮ ದರ್ಜೆ ಸಹಾಯಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಚೇರಿ, ಯಾದಗಿರಿ, ಗುಲ್ಬರ್ಗಾ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 96

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇ-1,2).

**ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಸಚಿವಾಲಯ**

**ತಿದ್ದುಪಡಿ ಆದೇಶ ಸಂಖ್ಯೆ: ವಾಪ್ರಯು 157 ವಾಪ್ರಸಿ 04, ಬೆಂಗಳೂರು, ದಿನಾಂಕ: 5ನೇ ಜನವರಿ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಪ್ರಯು 96 ವಾಪ್ರಸಿ 2003(1), ದಿನಾಂಕ:11.7.2003ರಲ್ಲಿ ಶ್ರೀ ಎನ್. ಕೆಂಚವೀರಪ್ಪ, ಸಹಾಯಕ ನಿರ್ದೇಶಕರು, ವಾರ್ತಾ ಇಲಾಖೆ, ಉಡುಪಿ ರವರನ್ನು ಗದಗ ಇಲ್ಲಿಗೆ ಹಾಗೂ ಶ್ರೀ ಎಂ. ಜುಂಜಣ್ಣ, ಸಹಾಯಕ ನಿರ್ದೇಶಕರು, ವಾರ್ತಾ ಇಲಾಖೆ, ಪುತ್ತೂರು ರವರನ್ನು ಉಡುಪಿಗೆ ವರ್ಗಾಯಿಸಲಾಗಿದ್ದು, ಈ ಇಬ್ಬರೂ ಅಧಿಕಾರಿಗಳ ವರ್ಗಾವಣೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಮಾಡಲಾಗಿದೆಯೆಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಸೀತಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

ಪಿ.ಆರ್. 98

**ತಿದ್ದುಪಡಿ ಆದೇಶ ಸಂಖ್ಯೆ: ವಾಪ್ರಯು 110 ವಾಪ್ರಸಿ 99, ಬೆಂಗಳೂರು, ದಿನಾಂಕ: 5ನೇ ಜನವರಿ 2005**

ಸರ್ಕಾರದ ಆದೇಶ ಸಂಖ್ಯೆ: ವಾಪ್ರಯು 110 ವಾಪ್ರಸಿ 99, ದಿನಾಂಕ:24.6.2004ರಲ್ಲಿ ಆದೇಶದ ಮೊದಲನೆ ಕಂಡಿಕೆಯಲ್ಲಿ "ಕೆ.ಸಿ.ಎಸ್. (ಬಡ್ತಿ ವೇತನ ಮತ್ತು ಪಿಂಚಣಿ ಕ್ರಮ ಬದ್ಧತೆ) ಆಕ್ಟ್ 1973ರ ಪರಿಚ್ಛೇದ 4(1) ಮತ್ತು (2)ರ ರೀತ್ಯಾ" ಎಂಬುದನ್ನು ತಿದ್ದಿಕೊಂಡು ಈ ಕೆಳಗಿನಂತೆ ಓದಿಕೊಳ್ಳುವುದು.

"ಕೆ.ಸಿ.ಎಸ್. (ಬಡ್ತಿ ವೇತನ ಮತ್ತು ಪಿಂಚಣಿ ಕ್ರಮ ಬದ್ಧತೆ) ಆಕ್ಟ್ 1973ರ ಪರಿಚ್ಛೇದ 4(1) ಮತ್ತು (2)ರನ್ವಯ"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಸೀತಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

ಪಿ.ಆರ್. 99

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಸೇರ್ಪಡೆ ಸಂಖ್ಯೆ: ಸಿಆಸುಇ 190 ಸಅರ 2004, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 190 ಸಅರ 2004, ದಿನಾಂಕ: 14.12.2004ರ ನಾಲ್ಕನೇ ಸಾಲಿನಲ್ಲಿ ದಿನಾಂಕ: 1.12.2004 ರಿಂದ ಜಾರಿಗೆ ಬರುವಂತೆ "30 ದಿನಗಳು" ಎಂಬ ಪದಗಳನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

ಪಿ.ಆರ್. 100

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಬಂಡವಾಳ ಹಿಂತೆಗೆಯುವಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಅಪರ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 607 ಎಸ್ಎಎಸ್ 2004 ದಿನಾಂಕ: 1.12.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಬಿ.ಕೆ. ದಾಸ್, ಐಎಎಸ್, ಇವರನ್ನು ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯ ಉನ್ನತೀಕರಿಸಿದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ. ಆದ್ದರಿಂದ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯ ಪ್ರಸ್ತುತ ಅಸ್ತಿತ್ವದಲ್ಲಿರುವ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಅಗತ್ಯತೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 95 ಸಸಿವಿ 2004 (1), ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸಲಾಗಿದೆ.

ಸದರಿ ಹುದ್ದೆಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 305 ಶಿಸಾಸೇ 2000, ದಿನಾಂಕ: 8.6.2001ರಲ್ಲಿ ನಿಗದಿಪಡಿಸಿರುವಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

ಪಿ.ಆರ್. 101

**FOREST, ECOLOGY AND ENVIRONMENT SECRETARIAT**

**CORRIGENDUM No. FEE 234 FLL 2003, Bangalore, Dated: 4th January 2005**

In Government Order No. FEE 330 FGL 2001, dated 8.5.2002 the condition No. "7" is deleted. Condition No.8,9 and 10 are renumbered as 7,8, and 9, respectively.

By Order and in the name of the Governor of Karnataka,
**S.R. VATSALA**
Under Secretary to Government,
Forest, Ecology and Environment Department.

P.R. 102

## EDUCATION SECRETARIAT

**Sub:** Nomination of a representative of Karnataka State to the Committee for consultation with the States in the NCERT reg.

**Read:** Letter No:PS(D) 16-5/2004 dated:23-11-2004 from the Director, NCERT, New Delhi.

**Preamble:-**

The Director, NCERT, New Delhi in his letter dated: 23.11.2004 read above has requested to nominate a senior academic representative of Karnataka State as member in the committee for consultation with the States setting up by council as a part of the exercise of National Curriculum Framework Review. After examining the request of the council the Government has decided to nominate a member and orders as follows.

**Government Order No: ED 406 YOSAKA 2004, Bangalore, Dated: 10th January 2005**

Government of Karnataka is pleased to nominate Dr.T.K. Jayalakshmi, Director, R.V. Consortium, Bangalore as its representative to act as a member in the committee for consultation with the States to be set up by NCERT as a part of the exercise of National Curriculum Frame work Review.

By Order and in the name of the Governor of Karnataka,

**K. SRIKANTESHWARA**

P.R. 103

Special Officer & Ex-Officio Deputy Secretary to Government (Planning),
Education Department.

## ಒಳಾಡಳಿತ ಸಚಿವಾಲಯ

**ವಿಷಯ:** ಅಪರಾಧಿಕ ಪ್ರಕರಣಗಳಲ್ಲಿ ವಿಚಾರಣಾ ನ್ಯಾಯಾಲಯದ ತೀರ್ಪಿನ : ನಿರ್ಣಯಗಳ ವಿರುದ್ಧ ಅಪೀಲನ್ನು ದಾಖಲಿಸುವ : ದಾಖಲಿಸದಿರುವ ಬಗ್ಗೆ ನಿರ್ಣಯ ತೆಗೆದುಕೊಳ್ಳುವ ಅಧಿಕಾರವನ್ನು ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ:**
1. ಅಧಿಸೂಚನೆ ಸಂಖ್ಯೆ:ಡಿಸಿಎ 7 ಆಆರ್‌ಬಿ 2004, ದಿನಾಂಕ: 22.9.2004.
2. ಟಿಪ್ಪಣಿ ಸಂಖ್ಯೆ:ಹೆಚ್‌ಡಿ:56 ಪಿಎಸ್ 2004, ದಿನಾಂಕ:17.12.2004.

**ಪೀಠಿಕೆ:**

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ:22.9.2004ರ ಅಧಿಸೂಚನೆಯಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳಿಗೆ ಸಂಬಂಧಿಸಿದ ವಿಷಯಗಳನ್ನು ಒಳಗೊಂಡಂತೆ ಅಪರಾಧಿಕ ಅಭಿಯೋಜನೆಗೆ ಸಂಬಂಧಿಸಿದ ವಿಷಯವನ್ನು ಸರ್ಕಾರವು ಕಾನೂನು ಇಲಾಖೆಯಿಂದ ಒಳಾಡಳಿತ ಇಲಾಖೆಗೆ ವರ್ಗಾಯಿಸಿರುತ್ತದೆ.

ವಿಚಾರಣಾ ನ್ಯಾಯಾಲಯಗಳ ದೋಷಮುಕ್ತ ಆದೇಶಗಳ ವಿರುದ್ಧ (ಅಕ್ವಿಟಲ್ ಆರ್ಡರ್ಸ್) ವಿರುದ್ಧ ಮೇಲ್ಮನವಿಯನ್ನು ಸಲ್ಲಿಸುವ ಅಥವಾ ಸಲ್ಲಿಸದಿರುವ ಅಂಶದ ಬಗ್ಗೆ ಅನುಮೋದನೆಗಾಗಿ ಅನೇಕ ಸಂಖ್ಯೆಯ ಕಡತವನ್ನು ಸರ್ಕಾರಕ್ಕೆ ಸಲ್ಲಿಸಲಾಗುತ್ತಿರುವುದನ್ನು ಮತ್ತು ಅಂತಹ ಅಧಿಕ ಸಂಖ್ಯೆಯ ಕಡತಗಳು ಕ್ರಮಕ್ಕಾಗಿ ಸರ್ಕಾರದ ಮಟ್ಟದಲ್ಲಿ ಇತ್ಯರ್ಥಕ್ಕಾಗಿ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. 7 ವರ್ಷ ಅವಧಿವರೆಗಿನ ಶಿಕ್ಷೆಯನ್ನು ಒಳಗೊಳ್ಳುವ ಅಪರಾಧಿಕ ಪ್ರಕರಣಗಳು ಸಾಮಾನ್ಯವಾಗಿ ಹೇಯ ಅಪರಾಧಗಳಾಗಿರುವುದಿಲ್ಲ ಮತ್ತು ಇಂಥಹ ಪ್ರಕರಣಗಳನ್ನು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಯವರ ನ್ಯಾಯಾಲಯ ಮತ್ತು ಪ್ರಧಾನ ನ್ಯಾಯಿಕ ದಂಡಾಧಿಕಾರಿಯವರ ನ್ಯಾಯಾಲಯಗಳಿಂದ ವಿಚಾರಣೆ ಮಾಡಲ್ಪಡುತ್ತದೆ. 7 ವರ್ಷಕ್ಕೂ ಮೀರಿದ ಅವಧಿಗೆ ಜೈಲು ಶಿಕ್ಷೆಯನ್ನು ಒಳಗೊಳ್ಳುವ ಪ್ರಕರಣಗಳು ಸತ್ರ ನ್ಯಾಯಾಲಯಗಳಿಂದ ವಿಚಾರಣೆ ಮಾಡಲ್ಪಡುತ್ತದೆ. ಈ ಬಗ್ಗೆ ಅಧಿಕಾರವನ್ನು ಪ್ರತ್ಯಾಯೋಜಿಸುವ ಕುರಿತು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 86 ಪಿಪಿಇ 2004, ಬೆಂಗಳೂರು, ದಿನಾಂಕ: 6ನೇ ಜನವರಿ 2005**

ಪೀಠಿಕೆಯಲ್ಲಿನ ವಿಷಯವನ್ನು ಸವಿಸ್ತಾರವಾಗಿ ಪರಿಶೀಲಿಸಿ ಅಪೀಲನ್ನು ಸಲ್ಲಿಸುವ ಅಥವಾ ಸಲ್ಲಿಸದಿರುವ ಬಗ್ಗೆ ನಿರ್ಣಯ ತೆಗೆದುಕೊಳ್ಳುವ ಅಧಿಕಾರವನ್ನು ಸರ್ಕಾರವು ಈ ಕೆಳಕಂಡಂತೆ ಪ್ರತ್ಯಾಯೋಜಿಸಿರುತ್ತದೆ.

1. 10 ವರ್ಷಕ್ಕೂ ಮೀರಿದ ಅವಧಿಗೆ ಜೈಲು ಶಿಕ್ಷೆಯನ್ನು ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ಸರ್ಕಾರವು ನಿರ್ಣಯ ತೆಗೆದುಕೊಳ್ಳುವುದು.

2. 10 ವರ್ಷ ಅವಧಿಯವರೆಗಿನ ಅವಧಿಗೆ ಜೈಲು ಶಿಕ್ಷೆಯನ್ನು ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ಅಭಿಯೋಜನಾ ನಿರ್ದೇಶನಾಲಯವು ನಿರ್ಣಯ ತೆಗೆದುಕೊಳ್ಳುವುದು.

3. 7 ವರ್ಷ ಅವಧಿಯವರೆಗಿನ ಅವಧಿಗೆ ಶಿಕ್ಷೆಯನ್ನು ಒಳಗೊಳ್ಳುವ : ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ಜಿಲ್ಲೆಯ ಜಿಲ್ಲಾಧಿಕಾರಿಯವರು ನಿರ್ಣಯ ತೆಗೆದುಕೊಳ್ಳುವುದು.

2. ಮತ್ತು ಈ ಕೆಳಕಂಡ ಆದೇಶವನ್ನು ಸಹ ಹೊರಡಿಸಿದೆ:

(i) ಅಭಿಯೋಜನಾ ನಿರ್ದೇಶನಾಲಯದ ಪ್ರಕಾರ್ಯಗಳ ಬಗ್ಗೆ ಸರ್ಕಾರವು ಸಮಯ ಬದ್ಧವಾಗಿ ಸಭೆಯನ್ನು ನಡೆಸಿ ಪುನರಾವಲೋಕಿಸುತ್ತದೆ. ನ್ಯಾಯಾಲಯಗಳಲ್ಲಿನ ವಿಚಾರಣೆ ಮತ್ತು ತನಿಖೆಯ ಗುಣಮಟ್ಟವನ್ನು ಸುಧಾರಿಸುವ ನಿಟ್ಟಿನಲ್ಲಿ ಪೊಲೀಸ್ ಮತ್ತು ಅಭಿಯೋಜನೆಯ ನಡುವೆ ಪರಿಣಾಮಕಾರಿ ಸಮನ್ವಯವನ್ನು ಸುನಿಶ್ಚಿತಗೊಳಿಸುವುದಕ್ಕಾಗಿ ಸದರಿ ಸಭೆಗಳಿಗೆ ಮಹಾನಿರ್ದೇಶಕರು ಮತ್ತು ಪೊಲೀಸ್ ಮಹಾನಿರೀಕ್ಷಕರು ಮತ್ತು ಅಭಿಯೋಜನಾ ನಿರ್ದೇಶಕರನ್ನು ಆಹ್ವಾನಿಸತಕ್ಕದ್ದು.

(ii) ಜಿಲ್ಲಾ ದಂಡಾಧಿಕಾರಿಗಳು ಮತ್ತು ಜಿಲ್ಲಾ ಪೊಲೀಸ್ ಅಧೀಕ್ಷಕರು ಮತ್ತು ಪೊಲೀಸ್ ಆಯುಕ್ತರು ಪ್ರತಿ ಮಾಹೆಯಲ್ಲಿ ಒಂದು ಸಾರಿ ಸಭೆಯನ್ನು ನಡೆಸಿ ತನಿಖಾಧಿಕಾರಿಗಳ ಮತ್ತು ಅಭಿಯೋಜನಾ ಅದಿಕಾರಿಗಳ ಕಾರ್ಯದ ಬಗ್ಗೆ ಪುನರಾವಲೋಕಿಸತಕ್ಕದ್ದು. ಈ ಸಭೆಗಳಲ್ಲಿ ಸಾಕ್ಷಿಗಳ ಸಕಾಲಿಕ ಮತ್ತು ಪರಿಣಾಮಕಾರಿ ಪರೀಕ್ಷೆ ಮತ್ತು ಪಾಟಿ ಸವಾಲು ಪರೀಕ್ಷೆಯನ್ನು ಒಳಗೊಂಡಂತೆ ತನಿಖೆ ಮತ್ತು ಅಭಿಯೋಜನೆಯ ಗುಣಮಟ್ಟವನ್ನು ಸುಧಾರಿಸಲು ಸಾಧ್ಯವಾಗುವ ಎಲ್ಲಾ ಕ್ರಮಗಳನ್ನು ಪುನರಾವಲೋಕಿಸತಕ್ಕದ್ದು. ಜಿಲ್ಲಾ ಕಾರ್ಯಕೇಂದ್ರಗಳ ಎಲ್ಲಾ ಅಭಿಯೋಜನಾ ಅಧಿಕಾರಿಗಳು ಸದರಿ

ಸಭೆಗೆ ಹಾಜರಾಗುವುದು. ಜಿಲ್ಲಾ ದಂಡಾಧಿಕಾರಿಗಳು ಕರೆಯುವ ಸಭೆಗಳಲ್ಲಿ ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿ ನ್ಯಾಯಾಲಯಗಳಲ್ಲಿ ಕಾರ್ಯನಿರ್ವಹಿಸುವ ಸಹಾಯಕ ಸರ್ಕಾರಿ ಅಭಿಯೋಜಕರ ಪರವಾಗಿ ಸಹಾಯಕ ಸರ್ಕಾರಿ ಅಭಿಯೋಜಕರುಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸುವುದಕ್ಕಾಗಿ ಮತ್ತು ಒದಗಿಸುವುದಕ್ಕಾಗಿ ಜಿಲ್ಲಾ ಕಾರ್ಯಕೇಂದ್ರಗಳಲ್ಲಿ ನೆಲೆಸಿರುವ ಒಬ್ಬ ಅಧಿಕಾರಿಯನ್ನು ಅಭಿಯೋಜನಾ ನಿರ್ದೇಶಕರು ಸಮನ್ವಯ ಅಧಿಕಾರಿಯಾಗಿ ಪದನಾಮೀಕರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 104

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಕಾ.ಮತ್ತು ಸು.ಮತ್ತು ಅಭಿಯೋಗಗಳು)

## HOME SECRETARIAT

**Sub:** Delegation of Powers in deciding filing/not filing of Appeal in Criminal cases against the decision of trial court.

**Read:** 1. Notification No:DCA 7 ARB 2004, dated 22.9.2004.

2. Note No: HD 56 PS 2004, dated 17.12.2004.

**Preamble:-**

Government in its notification read at (1) above have transferred the subject pertaining to criminal prosecution including matters relating to Director of Prosecution and Government litigation from Law Department to Home Department.

It is observed that many number of files are being submitted to Government for approval on the question of filing or not filing an appeal against the acquittal orders of trial courts and also learnt that large number of such files are pending at Government for action. The criminal cases involving punishment up to 7 years are generally non-heinous and are tried by the Judicial Magistrate First Grade Court & Chief Judicial Magistrate and cases involving punishment of imprisonment exceeding 7 years are tried by the Sessions Court. It is decided to delegate the powers in this regard. Hence the following order.

**Government Order No: HD 86 PPE 2004, Bangalore, Dated: 6th January 2005**

After a detailed examination Government are pleased to delegate the powers to decide on "filing the appeal" or "not filing the appeal" as follows:-

1. Cases involving punishment of imprisonment exceeding 10 years by the Government.
2. Cases involving punishment up to 10 years by the Directorate of Prosecution.
3. Cases involving punishment up to 7 years by the Deputy Commissioner of the District.

2. It is also ordered that:

(i) The functioning of the Directorate of Prosecutions will be reviewed by the Government regularly by holding meetings to which DGP & IG and Director of Prosecution would be invited for ensuring effective co-ordination between the police and the prosecution with a view to improving the quality of investigation and trial in the courts.

(ii) District Magistrates and Superintendents of Police in the districts and the Commissioners of Police would hold once a month meeting for reviewing the work being done by the investigating and prosecuting officers. At these meetings, all possible steps for improving quality of investigation and prosecution including timely and effective examination and cross examination etc., of witnesses will be reviewed. All the Prosecuting officers at the district headquarters will attend the meeting. For the Assistant Public Prosecutors working at the courts of the JMFC. Director of Prosecutions will designate a co-ordinating officer based at the district head quarters for collecting and furnishing information in respect of APPs at the meeting convened by District Magistrates.

By Order and in the name of the Governor of Karnataka,

**H.K. GUNDURAO**

P.R. 105

Under Secretary to Government,

Home Department (Law and Order)

## ಕಾರ್ಮಿಕ ಸಚಿವಾಲಯ

**ವಿಷಯ:** ಕಾರ್ಮಿಕ ಆಯುಕ್ತರ ವೃಂದದ ಹುದ್ದೆಯನ್ನು ಸೂಪರ್ ಟೈಂ ಸ್ಕೇಲ್‌ನಲ್ಲಿ ಸೃಜಿಸಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಕಾಇ 151 ಎಲ್‌ಇಟಿ 2003 ದಿನಾಂಕ: 30.4.2004.

2. ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್ 607 ಎಸ್‌ಎಎಸ್ 2004 ದಿನಾಂಕ: 26.10.2004.

3. ಪತ್ರ ಸಂಖ್ಯೆ: ಸಿಒಎಲ್/ ಐಎಎಸ್/2002-2003 ದಿನಾಂಕ: 1-12-2004 ಕಾರ್ಮಿಕ ಆಯುಕ್ತರು, ಬೆಂಗಳೂರು ಇವರಿಂದ

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:30.4.2004ರ ಆದೇಶದ ಮೂಲಕ ಶ್ರೀ ಸಂಜೀವ್ ಕುಮಾರ್, ಐ.ಎ.ಎಸ್., ಇವರು ಕಾರ್ಮಿಕ ಆಯುಕ್ತರಾಗಿ ಕಾರ್ಯಭಾರ ವಹಿಸಿಕೊಂಡ ದಿನಾಂಕದಿಂದ ಸದರಿ ಅಧಿಕಾರಿಯವರು ಕಾರ್ಮಿಕ ಆಯುಕ್ತರಾಗಿ ಮುಂದುವರೆಯುವವರೆಗೆ ಕಾರ್ಮಿಕ ಆಯುಕ್ತರ ಹುದ್ದೆಯನ್ನು ಸೂಪರ್ ಟೈಂ ಸ್ಕೇಲ್ ವೇತನ ಶ್ರೇಣಿಯಲ್ಲಿ ಮಂಜೂರು ಮಾಡಿ ಆದೇಶಿಸಲಾಗಿತ್ತು. ಕ್ರಮ ಸಂ:(2)ರಲ್ಲಿ ಓದಲಾದ ದಿನಾಂಕ:26.10.2004ರ ಅಧಿಸೂಚನೆ ಮೂಲಕ ಶ್ರೀ ಸಂಜೀವ್ ಕುಮಾರ್, ಕಾರ್ಮಿಕ ಆಯುಕ್ತರು ವರ್ಗಾವಣೆಗೊಂಡು ಅವರ ಸ್ಥಳದಲ್ಲಿ ಶ್ರೀ ವಿ.ಆರ್. ಪಟೇಲ್, ಐ.ಎ.ಎಸ್., ಇವರನ್ನು ಕಾರ್ಮಿಕ ಆಯುಕ್ತರನ್ನಾಗಿ ನಿಯುಕ್ತಿ ಮಾಡಲಾಗಿದೆ. ಶ್ರೀ ವಿ.ಆರ್. ಪಟೇಲ್, ಕಾರ್ಮಿಕ ಆಯುಕ್ತರು ಇವರು ಸಹ ಸೂಪರ್ ಟೈಂ ಸ್ಕೇಲ್ ವೇತನ ಶ್ರೇಣಿಯ ಅಧಿಕಾರಿಯಾಗಿದ್ದು, ಈ ವೇತನ ಶ್ರೇಣಿಯಲ್ಲಿ ಕಾರ್ಮಿಕ ಆಯುಕ್ತರ ವೃಂದದಲ್ಲಿ ವೇತನ ಪಡೆಯಲು ಅನುಕೂಲ ಆಗುವಂತೆ ಕಾರ್ಮಿಕ ಆಯುಕ್ತರ ಹುದ್ದೆಯನ್ನು ಅವರು ಈ ಹುದ್ದೆಯ ಪ್ರಭಾರ ವಹಿಸಿಕೊಂಡ ದಿನಾಂಕದಿಂದ ಈ ಹುದ್ದೆಯಲ್ಲಿ ಮುಂದುವರೆಯುವ ಅವಧಿಗೆ ಕಾರ್ಮಿಕ ಆಯುಕ್ತರ ಹುದ್ದೆಯನ್ನು ಸೂಪರ್ ಟೈಂ ಸ್ಕೇಲ್‌ನಲ್ಲಿ ಸೃಜಿಸಿ ಮುಂದುವರೆಸುವಂತೆ ಕ್ರಮ ಸಂ:(3)ರಲ್ಲಿ ಓದಲಾದ ಪತ್ರದಲ್ಲಿ ಕಾರ್ಮಿಕ ಆಯುಕ್ತರು ಕೋರಿರುತ್ತಾರೆ. ಕಾರ್ಮಿಕ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರ ಕೂಲಂಕುಶವಾಗಿ ಪರಿಶೀಲಿಸಿ ಈ ಕೆಳಕಾಣಿಸಿದಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 306 ಎಲ್‌ಇಟಿ 2004, ಬೆಂಗಳೂರು, ದಿನಾಂಕ: 6ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಅಧಿಸೂಚನೆ ಸಂ:ಡಿಪಿಎಆರ್ 607 ಎಸ್‌ಎಎಸ್ 2004 ದಿನಾಂಕ:26.10.2004ರ ಮೂಲಕ ಸೂಪರ್ ಟೈಂ ಸ್ಕೇಲ್ ರೂ.18,400-500-22,400 ಹೊಂದಿದ ಶ್ರೀ ವಿ.ಆರ್. ಪಟೇಲ್, ಐ.ಎ.ಎಸ್., ಇವರು ಕಾರ್ಮಿಕ ಆಯುಕ್ತರಾಗಿ ನೇಮಿಸಿದ್ದು, ಸದರಿ ಅಧಿಕಾರಿಯವರು ಕಾರ್ಮಿಕ ಆಯುಕ್ತರಾಗಿ ದಿನಾಂಕ:3.11.2004ರಿಂದ ಪ್ರಭಾರ ವಹಿಸಿಕೊಂಡಿರುವುದರಿಂದ, ಈ ಹುದ್ದೆಯಲ್ಲಿ ಸೂಪರ್ ಟೈಂ ಸ್ಕೇಲ್‌ನಲ್ಲಿ ವೇತನ ಪಡೆಯಲು ಅನುಕೂಲವಾಗುವಂತೆ ದಿನಾಂಕ:3.11.2004 ರಿಂದ ಸದರಿ ಅಧಿಕಾರಿಯವರು ಕಾರ್ಮಿಕ ಆಯುಕ್ತರಾಗಿ ಮುಂದುವರೆಯುವವರೆಗೆ ಕಾರ್ಮಿಕ ಆಯುಕ್ತರ ಹುದ್ದೆಯನ್ನು ಸೂಪರ್ ಟೈಂ ಸ್ಕೇಲ್‌ನ ವೇತನ ಶ್ರೇಣಿಯಲ್ಲಿ ಸೃಜಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 106

**ಬಿ.ಎಂ. ಮಠಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ನಕಲಿ ಛಾಪಾ ಕಾಗದದ ಹಗರಣಗಳಿಗೆ ಸಂಬಂಧಿಸಿದಂತೆ ಕರ್ತವ್ಯ ನಿರ್ಲಕ್ಷ್ಯ ತೋರಿದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004 ದಿನಾಂಕ:23.1.2004.
2. ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬಿ:5:25:03-04, ದಿನಾಂಕ 12-7-2004.

**ಪ್ರಸ್ತಾವನೆ:**

ಮೇಲೆ ಓದಲಾದ (2)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ಅವರು ಶ್ರೀ ರಾಘವೇಂದ್ರ ಹೆಚ್.ಔರಾದ್‌ಕರ್, ಐ.ಪಿ.ಎಸ್, ಡಿ.ಐ.ಜಿ., ಸ್ಟೇಟ್ ಇಂಟೆಲಿಜೆನ್ಸ್ ಮತ್ತು ಸ್ಟ್ಯಾಂಪಿಟ್ ಇವರು ನಕಲಿ ಛಾಪ ಕಾಗದ ಹಗರಣಕ್ಕೆ ಸಂಬಂಧಿಸಿದಂತೆ ಪೊಲೀಸ್ ಅಧಿಕಾರಿಗಳು ಎಸಗಿರುವ ಕರ್ತವ್ಯ ಲೋಪಗಳ ಬಗ್ಗೆ ಪೂರ್ವಭಾವಿ ವಿಚಾರಣೆ ನಡೆಸಿರುತ್ತಾರೆಂದು ತಿಳಿಸಿ ನಕಲಿ ಛಾಪಕಾಗದ ಹಗರಣದ ಪ್ರಮುಖ ಆರೋಪಿ ಶ್ರೀ ಅಬ್ದುಲ್ ಕರೀಂ ತೆಲಗಿಯು ಉಪ್ಪಾರಪೇಟೆ ಪೊಲೀಸ್ ಠಾಣೆಯಲ್ಲಿ ಅಪರಾಧ ಸಂಖ್ಯೆ:545/2000ರ ತನಿಖೆಯ ವೇಳೆಯಲ್ಲಿ ಪೊಲೀಸ್ ವಶದಲ್ಲಿದ್ದಾಗ ಅವನಿಗೆ ಅನಾವಶ್ಯಕ (undue) ಅನುಕೂಲಗಳನ್ನು ಮಾಡಿಕೊಟ್ಟಿದ್ದಾರೆಂಬ ಬಗ್ಗೆ ಪೂರ್ವಭಾವಿ ವಿಚಾರಣಾ ವರದಿಯಲ್ಲಿ ವಿವರವಾಗಿ ತಿಳಿಸಿರುತ್ತಾರೆಂದು ವರದಿ ಸಲ್ಲಿಸಿರುತ್ತಾರೆ. ಮುಂದುವರಿದು ಹಲವು ಅಧಿಕಾರಿಗಳು ಕರ್ತವ್ಯಲೋಪ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿದೆ ಎಂದು ತಿಳಿಸಿ ಕಾನೂನು ಮತ್ತು ಸುವ್ಯವಸ್ಥೆ ಕಾಪಾಡುವ ಹೊಣೆ ಹೊತ್ತಿರುವ ಪೊಲೀಸ್ ಅಧಿಕಾರಿಗಳು ದುರುದ್ದೇಶಪೂರ್ವಕವಾಗಿ ಸಾರ್ವಜನಿಕ ಹಿತಾಸಕ್ತಿಗೆ ವಿರುದ್ಧವಾಗಿ ನಡೆದುಕೊಂಡು ಅತೀವ ಕರ್ತವ್ಯಲೋಪವೆಸಗಿದ್ದಾರೆ ಎಂದು ತಿಳಿಸಿದ್ದಾರೆ. ಇದಕ್ಕೆ ಈ ಕೆಳಕಂಡ ಪೊಲೀಸ್ ಅಧಿಕಾರಿಗಳು ಜವಾಬ್ದಾರರಾಗಿದ್ದಾರೆ ಎಂದು ತಿಳಿಸಿದ್ದಾರೆ:

1) Shri B.N.Nagaraj, IPS, the then Joint Commissioner of Police(Crimes), Bangalore City (since retired) has not shown diligence In his supervisory duties.
2) Shri U.Nisar Ahmed, IPS, negligence in supervisory duties as DCP, West Division, Bangalore City, inclulding non issuance of GCR by the ACP etc.
3) Shri G.A.Bava, ACP, his role as a supervisory officer and complainant of the case is discussed in detail in the preliminary enquiry report.
4) Shri H.J.Mariswamy Gowda, Police Inspector, his role as I.O. of the case.
5) Shri K.Nanjunde Gowda, Police Inspector, his role as Assistant Investigating Officer of the case.
6) Shri Vali Basha, Police Inspector, his role as Assistant Investigating Officer of the case.(under suspension)
7) Shri Vazeer Ahmed Khan, PSI, his role as Assistant Investigating Officer of the case.(under suspension)
8) Shri M.A.Saudagar, Dy.S.P. for contacting Telgi on behalf of Shri Nisar Ahmed to collect Rs.12 lakhs, and in renovating the Commercial Street Police Station.

9) Shri K.M.Muddaiah, Dy.S.P. (under suspension in connection with Crime No.176/1999 of R.T.Nagar Police Station). Further evidence against Shri K.M.Muddaiah has surfaced during the course of enquiry about omissions and commissions in the investigation of this case.

2. ಈ ಮೇಲಿನ ಅಧಿಕಾರಿಗಳಲ್ಲಿ ಕ್ರಮ ಸಂಖ್ಯೆ:1ರಲ್ಲಿನ ಶ್ರೀ ಬಿ.ಎನ್.ನಾಗರಾಜ್, ಐ.ಪಿ.ಎಸ್. ಇ ವರು ದಿನಾಂಕ 30-6-03ರಂದು ವಯೋ ನಿವೃತ್ತಿ ಹೊಂದಿರುತ್ತಾರೆಂದೂ, ಕ್ರಮ ಸಂಖ್ಯೆ 6 ಮತ್ತು 7ರಲ್ಲಿನ ಶ್ರೀ ವಾಲಿಬಾಷಾ ಪಿ.ಐ. ಮತ್ತು ಶ್ರೀ ವಜೀರ್ ಅಹಮದ್ ಖಾನ್ ಪಿ.ಎಸ್.ಐ. ಇ ವರನ್ನು ಸಿಟಿ ಮಾರ್ಕೆಟ್ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುವ ಅಪರಾಧ ಸಂಖ್ಯೆ:109/1997 ಮತ್ತು 17/1998ರ ಸಂಬಂಧದಲ್ಲಿ ಈಗಾಗಲೇ ಅಮಾನತ್ತಿನಲ್ಲಿಡಲಾಗಿದೆ ಎಂದು ತಿಳಿಸಿರುತ್ತಾರೆ. ಮುಂದುವರಿದು, ಶ್ರೀ ಕೆ.ಎಂ.ಮುದ್ದಯ್ಯ, ಡಿವೈ.ಎಸ್.ಪಿ. ಇ ವರು ಆರ್.ಟಿ.ನಗರ ಪೊಲೀಸ್ ಠಾಣೆಯಲ್ಲಿ ನಕಲಿ ಛಾಪ ಕಾಗದದ ಹಗರಣಕ್ಕೆ ಸಂಬಂಧಿಸಿದ ಅಪರಾಧ ಸಂಖ್ಯೆ:176/1999ರ ಸಂಬಂಧದಲ್ಲಿ ಅಮಾನತ್ತುಗೊಂಡಿರುತ್ತಾರೆಂದು ಡಿಜಿ ಮತ್ತು ಐಜಿಪಿರವರು ತಿಳಿಸಿರುತ್ತಾರೆ. ವಿಚಾರಣಾಧಿ ಕಾರಿಗಳು ತಮ್ಮ ಪೂರ್ವಭಾವಿ ವರದಿಯಲ್ಲಿ ಈ ಎಲ್ಲಾ ಅಧಿಕಾರಿಗಳ ವಿರುದ್ಧ ಪೂರಕವಾದ ಸಾಕ್ಷ್ಯಾಧಾರಗಳೊಂದಿಗೆ ನಿರ್ದಿಷ್ಟವಾದ ಶಿಸ್ತು ಕ್ರಮವನ್ನು ಕೈಗೊಳ್ಳಲು ಪ್ರಸ್ತಾಪಿಸಿರುತ್ತಾರೆಂದು ತಿಳಿಸಿರುತ್ತಾರೆ.

3. ಈ ಪ್ರಕರಣದ ತೀವ್ರತೆ ಮತ್ತು ಅದರ ವ್ಯಾಪ್ತಿ ಗೊತ್ತಿದ್ದರೂ ಸಹ ಈ ಮೇಲ್ಕಂಡ ಎಲ್ಲಾ ಅಧಿಕಾರಿಗಳು ವೈಯುಕ್ತಿಕವಾಗಿ ಹಾಗೂ ಜಂಟಿಯಾಗಿ ತನಿಖೆ/ಮೇಲ್ವಿಚಾರಣೆ ನಡೆಸುವಲ್ಲಿ ವಿಫಲರಾಗಿದ್ದಾರೆಂದು ಮತ್ತು ಪೊಲೀಸ್ ಅಧಿಕಾರಿಗಳಿಗೆ ಹೊಂದುವಂತಹ ರೀತಿಯಲ್ಲಿ ವರ್ತಿಸದೇ ಕರ್ತವ್ಯದಲ್ಲಿ ಘೋರ ದುರ್ನಡತೆ ಎಸಗಿದ್ದಾರೆಂದು findings ಬಹಳ ತೀವ್ರ ತರವಾಗಿದ್ದು ಮೇಲ್ಕಂಡ ಎಲ್ಲಾ ಅಧಿಕಾರಿಗಳನ್ನು ಈಗಾಗಲೇ ಮೇಲೆ ಸೂಚಿಸಿದಂತೆ ಅಮಾನತ್ತಿನಲ್ಲಿರುವ ಅಧಿಕಾರಿಗಳನ್ನು ಹೊರತುಪಡಿಸಿ ಹಾಗೂ ಈಗಾಗಲೇ ನಿವೃತ್ತಿ ಹೊಂದಿರುವ ಶ್ರೀ ಬಿ.ಎನ್.ನಾಗರಾಜ್ ಇ ವರನ್ನು ಹೊರತುಪಡಿಸಿ ಉಳಿದ ಅಧಿಕಾರಿಗಳನ್ನು ಅಮಾನತ್ತಿನಲ್ಲಿಡಲು ಮತ್ತು ಈ ಎಲ್ಲಾ ಅಧಿಕಾರಿಗಳ ಮೇಲೆ ನಿವೃತ್ತಿ ಹೊಂದಿರುವ ಶ್ರೀ ಬಿ.ಎನ್.ನಾಗರಾಜ್ ಸಹಿತವಾಗಿ ಘೋರ ದಂಡನೆ ವಿಧಿಸಲು All India Service (Disciplinary & Appeals) Rules 1969 ಮತ್ತು Karnataka State Police (Disciplinary Proceedings) Rules 1965, ಇ ವುಗಳಲ್ಲಿ ಯಾವುದು ಅನ್ವಯವಾಗುತ್ತದೆಯೋ ಅದರಂತೆ, ಶಿಸ್ತು ಕ್ರಮ ಜರುಗಿಸಲು ಡಿಜಿ ಮತ್ತು ಐಜಿಪಿರವರು ಶಿಫಾರಸು ಮಾಡಿರುತ್ತಾರೆ.

4. ಮೇಲೆ ಓದಲಾದ(1)ರ ಆದೇಶದಲ್ಲಿ (1) ಶ್ರೀ ಟಿ.ಜಿ.ಸಂಗ್ರಾಮ್ ಸಿಂಗ್, ಎ.ಸಿ.ಪಿ. (2) ಶ್ರೀ ವಾಲಿಭಾಷ, ಪಿ.ಐ. (3) ಶ್ರೀ ವಜೀರ್ ಅಹಮ್ಮದ್ ಖಾನ್,ಪಿ.ಎಸ್.ಐ. (4) ಶ್ರೀ ಕೆ.ಎಂ. ಮುದ್ದಯ್ಯ, ಡಿ.ಎಸ್.ಪಿ. ಇ ವರುಗಳ ವಿರುದ್ಧ ಕೆ.ಎಸ್.ಪಿ. (ಡಿ.ಪಿ) ನಿಯಮಗಳು, 1965ರ ನಿಯಮ 6 ಹಾಗೂ 8ರ ಮೇರೆಗೆ ಜಂಟಿ ಇ ಲಾಖಾ ವಿಚಾರಣೆಯನ್ನು ನಡೆಸಲು ಹಾಗೂ ಶ್ರೀ ಹನುಮಂತಪ್ಪ, ನಿವೃತ್ತ ಡಿ.ಎಸ್.ಪಿ. ಇ ವರ ವಿರುದ್ಧ, ಕೆ.ಸಿ.ಎಸ್.ಆರ್. ನಿಯಮ 214ರ ಪ್ರಕಾರ ಕ್ರಮ ಜರುಗಿಸಲು ಆದೇಶಿಸಲಾಗಿದೆ. ಮುಂದುವರಿದು, ಈ ಜಂಟಿ ಇ ಲಾಖ ವಿಚಾರಣೆಯನ್ನು ಕಾಯ್ದಿರಿಸಿ ಮೇಲ್ಕಂಡ ಅಧಿಕಾರಿಗಳನ್ನು ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5ರ ಪ್ರಕಾರ ಸೇವೆಯಿಂದ ಅಮಾನತ್ತಿನಲ್ಲಿರಿಸಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004, ಬೆಂಗಳೂರು, ದಿನಾಂಕ:7ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಹಾಗೂ 8ರ ಮೇರೆಗೆ ಜಂಟಿ ಇ ಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಲಾಗಿದೆ.

1) ಶ್ರೀ ಜಿ.ಎ.ಬಾವ, ಎ.ಸಿ.ಪಿ, ಸಿಟಿ ಕ್ರೈಂ ಬ್ರಾಂಚ್, ಬೆಂಗಳೂರು ನಗರ.
2) ಶ್ರೀ ಹೆಚ್.ಜೆ.ಮರಿಸ್ವಾಮಿಗೌಡ, ಪೊಲೀಸ್ ಇ ನ್ಸ್‌ಪೆಕ್ಟರ್, ಅಶೋಕ ನಗರ, ಪೊಲೀಸ್ ಠಾಣೆ, ಬೆಂಗಳೂರು ನಗರ.
3) ಶ್ರೀ ಕೆ.ನಂಜುಂಡೇಗೌಡ, ಪೊಲೀಸ್ ಇ ನ್ಸ್‌ಪೆಕ್ಟರ್, ಸಿ.ಸಿ.ಬಿ, ಬೆಂಗಳೂರು ನಗರ.
4) ಶ್ರೀ ವಾಲಿಬಾಷ, ಪೊಲೀಸ್ ಇ ನ್ಸ್‌ಪೆಕ್ಟರ್, (ಅಮಾನತ್ತಿನಲ್ಲಿದ್ದಾರೆ).
5) ಶ್ರೀ ವಜೀರ್ ಅಹಮದ್ ಖಾನ್, ಪಿ.ಎಸ್.ಐ, (ಅಮಾನತ್ತಿನಲ್ಲಿದ್ದಾರೆ).
6) ಶ್ರೀ ಎಂ.ಎ.ಸೌದಾಗರ್, ಡಿವೈ.ಎಸ್.ಪಿ, ಸಿ.ಓ.ಡಿ, ಬೆಂಗಳೂರು.
7) ಶ್ರೀ ಕೆ.ಎಂ.ಮುದ್ದಯ್ಯ, ಡಿವೈ.ಎಸ್.ಪಿ, (ಅಮಾನತ್ತಿನಲ್ಲಿದ್ದಾರೆ).

ಈ ವಿಚಾರಣೆಯನ್ನು ನಡೆಸಲು ಎ.ಡಿ.ಜಿ.ಪಿ. (ನೇಮಕಾತಿ ಮತ್ತು ತರಬೇತಿ) ಇ ವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 19 ಸೇಇ ವಿ 2001, ದಿನಾಂಕ 28-06-2001ರಲ್ಲಿ ಹೊರಡಿಸಿರುವ ಸೂಚನೆಗಳಂತೆ ವಿಚಾರಣೆಯನ್ನು 3 ತಿಂಗಳೊಳಗೆ ಪೂರ್ಣಗೊಳಿಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸಲಾಗಿದೆ. ಸದರಿ ಸೂಚನೆಗಳನ್ವಯ ನಿಗದಿತ ಅವಧಿಯಲ್ಲಿ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 107

**ಆರ್.ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇ ಲಾಖೆ, (ಪೊಲೀಸ್ ಸೇವೆಗಳು).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ಆದೇಶ ಸಂಖ್ಯೆ: ಗ್ರಾಅಪ 143 ಜಿಪಅ 04, ಬೆಂಗಳೂರು, ದಿನಾಂಕ: 11ನೇ ಜನವರಿ 2005**

**ವಿಷಯ:** ಶ್ರೀ ಕೆ.ಟಿ. ತಿಮ್ಮಪ್ಪ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಪಂಇಂ ಉಪ ವಿಭಾಗ, ಶಿವಮೊಗ್ಗ ಇವರ ಅಮಾನತ್ತಿನ ಬಗ್ಗೆ - ಆದೇಶ.

**ಓದಲಾಗಿದೆ:** 1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಪಂ, ಶಿವಮೊಗ್ಗ, ಇವರ ಪತ್ರದ ಸಂಖ್ಯೆ:ಜಿಪಂಶಿ:ಸಿಬ್ಬಂದಿ(3):ಇಂ:ವಿವ:16: 04-05, ದಿ:6.7.04.

ಶ್ರೀ ಕೆ.ಟಿ. ತಿಮ್ಮಪ್ಪ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಪಂಇಂ ಉಪ ವಿಭಾಗ, ಶಿವಮೊಗ್ಗ ಇವರು ದಿನಾಂಕ:4.6.04ರಂದು ನಡೆದ ಶಿವಮೊಗ್ಗ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸಭೆಗೆ ಒಂದಿಲ್ಲೊಂದು ಕಾರಣ ನೀಡಿ ಗೈರು ಹಾಜರಾಗುತ್ತಿದ್ದು, ಇದರಿಂದ ತಾಲ್ಲೂಕಿಗೆ ಸಂಬಂಧಿಸಿದ ವಿವಿಧ ಯೋಜನೆಗಳ ಕ್ರಿಯಾ ಯೋಜನೆಗಳಡಿ ಅನುಮೋದನೆಯಾದ ರಸ್ತೆ ಕುಡಿಯುವ ನೀರಿನ ಕಾಮಗಾರಿ ಮತ್ತಿತರ ಕಾಮಗಾರಿಗಳ ಬಗ್ಗೆ ಸಭೆಯಲ್ಲಿ ಜನಪ್ರತಿನಿಧಿಗಳಿಗೆ ಸರಿಯಾದ ಮಾಹಿತಿ ನೀಡದಿರುವಂತಾಗಿದ್ದು, ಇವರು ತಾಲ್ಲೂಕು ಪಂಚಾಯತ್‌ನ ಪ್ರತಿ ಸಭೆಗಳಿಗೂ ಕೂಡಾ ಗೈರುಹಾಜರಾಗುತ್ತಿರುವ ವಿಷಯವು ಸಭೆಗಳಲ್ಲಿ ಚರ್ಚೆಯಾಗಿ, ಸದರಿಯವರ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳಲು ಸಭೆಯ ನಡವಳಿಯ ತೀರ್ಮಾನದ ಪ್ರಕಾರ ಅಗತ್ಯ ಕ್ರಮ ಕೈಗೊಳ್ಳುವಂತೆ ಶಿವಮೊಗ್ಗ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿಯವರು ವರದಿ ಸಲ್ಲಿಸಿದ್ದು, ಸದರಿ ವರದಿಯಂತೆ ಇವರ ಮೇಲೆ ಶಿಸ್ತಿನ ಕ್ರಮ ಕೈಗೊಳ್ಳುವಂತೆ ಶಿವಮೊಗ್ಗ ಜಿಪಂ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯವರು ಸರ್ಕಾರಕ್ಕೆ ವರದಿ ಮಾಡಿರುವುದರಿಂದಲೂ,

ಶಿವಮೊಗ್ಗ ಜಿಲ್ಲಾ ಪಂಚಾಯತಿನ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯವರ ವರದಿಯನ್ನು ಅವಗಾಹಿಸಲಾಗಿ ಶ್ರೀ ಕೆ.ಟಿ. ತಿಮ್ಮಪ್ಪ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಶಿವಮೊಗ್ಗ ಇವರು ತಮ್ಮ ಕರ್ತವ್ಯದಲ್ಲಿ ತೀವ್ರ ಅಸಡ್ಡೆ ಎಸಗಿದ್ದಾರೆಂಬುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ;

ಇವರು ಎಸಗಿರುವ ಕರ್ತವ್ಯ ಲೋಪವು ಅವರ ಜವಾಬ್ದಾರಿಯಾದ ಹುದ್ದೆಗೆ ಸಂಬಂಧಿಸಿರುವುದರಿಂದಲೂ ಮತ್ತು ಇದು ಅವರ ಕರ್ತವ್ಯಗಳ ನಿರ್ವಹಣೆಯಲ್ಲಿ ಅವರನ್ನು ಇಕ್ಕಟ್ಟಿಗೆ ಸಿಕ್ಕಿಸುವಂತವುಗಳಾಗಿರುವುದರಿಂದಲೂ;

ವಿಷಯ, ಸಂಬಂಧ, ಸನ್ನಿವೇಶ ಮತ್ತು ಈಗ ಒದಗಿ ಬಂದಿರುವ ದಾಖಲೆಗಳನ್ನು ಪರಿಶೀಲಿಸಲಾಗಿ ಶ್ರೀ ಕೆ.ಟಿ. ತಿಮ್ಮಪ್ಪ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಕೈಗೊಳ್ಳಲು ಅವಲೋಕಿಸಿರುವುದರಿಂದಲೂ;

ಮತ್ತು ಶ್ರೀ ಕೆ.ಟಿ. ತಿಮ್ಮಪ್ಪ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಇವರನ್ನು ಅಮಾನತ್ತಿನಲ್ಲಿಡುವುದು ಆಕ್ಷೇಪಣೀಯವೆಂದು ಸರ್ಕಾರವು ಅಭಿಪ್ರಾಯಪಟ್ಟಿರುವುದರಿಂದಲೂ;

ಆದ್ದರಿಂದ, ಈಗ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ 10ನೇ ನಿಯಮದ 1 (ಡಿ) ಉಪ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಟಿ. ತಿಮ್ಮಪ್ಪ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ, ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಇವರನ್ನು ತಕ್ಷಣದಿಂದ ಜಾರಿ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಕೆ.ಟಿ. ತಿಮ್ಮಪ್ಪ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಇವರಿಗೆ ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಗಳನ್ನು ಸಂದಾಯ ಮಾಡತಕ್ಕದ್ದು.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಕೆ.ಟಿ. ತಿಮ್ಮಪ್ಪ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಕ್ಕೆ ಲಿಖಿತ ಅನುಮತಿ ಇಲ್ಲದೆ ತಮ್ಮ ಕಚೇರಿ ಇರುವ ಸ್ಥಳವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್. 108

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** 2004-2005ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಹಣ ಹಾವೇರಿ, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡುವ (ಶೇ.25 ರಷ್ಟು ಹಂಚಿಕೆ) ಬಗ್ಗೆ.

**ಉಲ್ಲೇಖ:**

1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ 17013 : 10 : 2004 ಎಸ್‌ಜಿಎಸ್‌ವೈ-1 (13) ದಿನಾಂಕ: 22.4.2004 ಮತ್ತು (58) ದಿನಾಂಕ: 16.11.2004.
2. ಸಂಖ್ಯೆ ಆಇ 1091 ವೆಚ್ಚ 6 : 2004 ದಿನಾಂಕ: 23.8.2004.
3. ಸರ್ಕಾರದ ಆದೇಶ ಸಮಸಂಖ್ಯೆ ದಿನಾಂಕ 17.9.2004 ಮತ್ತು 29.12.2004.
4. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: 17013:10:2004 ಎಸ್‌ಜಿಎಸ್‌ವೈ I (80) ದಿನಾಂಕ: 16.12.2004.

**ಪ್ರಸ್ತಾವನೆ:**

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಉಲ್ಲೇಖಿತ ಪತ್ರ (1) ಮತ್ತು (3)ರಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್ ಜಿ ಎಸ್ ವೈ) ಒಂದನೇ ಕಂತಿನ ಹಣ ರೂ.20,03,38,000-00 ಮತ್ತು ರೂ.6,67,79,000 ಗಳನ್ನು ಅನುಕ್ರಮವಾಗಿ ಬಿಡುಗಡೆ ಮಾಡಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಗುಲ್ಬರ್ಗಾ ಜಿಲ್ಲೆಗೆ ಎರಡನೇ ಕಂತಿನ ಕೇಂದ್ರ ಪಾಲಿನ ಹಣ ರೂ.1,15,13,000 ಮತ್ತು 38,38,000ಗಳನ್ನು ಬಿಡುಗಡೆ ಮಾಡಲಾಗಿದೆ. (ಉಲ್ಲೇಖ (1) ಮತ್ತು (3)ರಂತೆ.) ಈಗ ಕೇಂದ್ರ ಸರ್ಕಾರ ಉಲ್ಲೇಖ (4)ರಂತೆ ಹಾವೇರಿ, ಶಿವಮೊಗ್ಗ ಮತ್ತು ತುಮಕೂರು ಜಿಲ್ಲೆಗಳಿಗೆ ರೂ.2,30,37,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಹಣ ರೂ.76,79,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 18 ಸ್ವಜಯೋ 2004, ಬೆಂಗಳೂರು, ದಿನಾಂಕ: 10ನೇ ಜನವರಿ 2005**

ರಾಜ್ಯ ಸರ್ಕಾರವು ಕೆಳಕಂಡ ಮೂರು ಜಿಲ್ಲಾ ಪಂಚಾಯತ್‌ಗಳಿಗೆ ಎರಡನೇ ಕಂತಿನ ಹಣ ರೂ.76,79,000-00 (ರೂ.ಎಪ್ಪತ್ತಾರು ಲಕ್ಷದ ಎಪ್ಪತ್ತೊಂಬತ್ತು ಸಾವಿರ ಮಾತ್ರ) ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿ. ಪಂ. ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ 2ನೇ ಕಂತು | ರಾಜ್ಯಸರ್ಕಾರ ಬಿಡುಗಡೆ ಮಾಡುತ್ತಿರುವ 2ನೇ ಕಂತು |
|---|---|---|---|---|---|
| 1 | ಹಾವೇರಿ | 463 | 2700ZZ0001 | 32,88,000 | 10,96,000 |
| 2 | ಶಿವಮೊಗ್ಗ | 405 | 1400ZZ0002 | 79,56,000 | 26,52,000 |
| 3 | ತುಮಕೂರು | 406 | 0800ZZ0001 | 1,17,93,000 | 39,31,000 |
| | | | **ಒಟ್ಟು** | **2,30,37,000** | **76,79,000** |

1999ನೇ ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾಪಂಚಾಯತ್‌ಗಳು-07-ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ - ಯೋಜನೆ 2004-2005 (2501-01-196-1-07) ರಡಿ ಭರಿಸತಕ್ಕದ್ದು.

ಮುಖ್ಯಲೆಕ್ಕಾಧಿಕಾರಿಗಳು, ಜಿಲ್ಲಾಪಂಚಾಯತ್, ಹಾವೇರಿ, ಶಿವಮೊಗ್ಗ ಮತ್ತು ತುಮಕೂರು ಇವರು ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2004-2005ನೇ ಸಾಲಿನ ಅನುಮೋದಿತ ವಾರ್ಷಿಕ ಕ್ರಿಯಾ ಯೋಜನೆಯನ್ನು ಸಂಬಂಧಿಸಿದ ಉಪಕಾರ್ಯದರ್ಶಿ (ಅಭಿವೃದ್ಧಿ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಆಯಾ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಮುಖ್ಯಲೆಕ್ಕಾಧಿಕಾರಿಗಳು, ಜಿಲ್ಲಾಪಂಚಾಯತ್, ಹಾವೇರಿ, ಶಿವಮೊಗ್ಗ ಮತ್ತು ತುಮಕೂರು ಇವರು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 5 ಪಿಬಿಎಸ್ 05 ದಿನಾಂಕ: 7.1.2005 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ.5 ದಿನಾಂಕ: 10.1.2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಮ್. ಶಿವಪ್ರಕಾಶ್**
ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## RURAL DEVELOPMENT AND PANCHAYAT RAJ SECRETARIAT

**Sub:** Release of SGSY II instalment of State share (25% of the allocation) to Haveri, Shimoga and Tumkur for the year 2004-2005.

**Read:**
1. GOI Ltr. No. 17013/10/2004-SGSY-I (13) Dtd. 22.4.2004 & (58) dated 16.11.2004.
2. No. FD 1091 Exp-6 : 2004 Dated 23.8.2004.
3. State Government Order Dtd. 17.9.2004 & 29.12.2004.
4. Govt of India Ltr. No.17013/10/2004 SGSY - I (80) Dtd. 16.12.2004.

**Preamble:-**

Government of India and the State Government have released Rs.20,03,38,000/- & Rs.6,67,79,000/-respectively to all the districts in Karnataka under Swarna Jayanthi Grama Swarozgar Yojana (SGSY) for the year 2004-2005 as I instalment in ref (1) & (3) Government of India and the State Government have released Rs.1,15,13,000/- & 38,38,000/- (ref (1) & (3)) as II instalment to Gulbarga District. Now Government of India in ref (4) has released Rs. 2,30,37,000/- to Haveri, Shimoga & Tumkur Zilla Panchayats. Accordingly State has to release its share Rs.76,79,000 to Haveri, Shimoga & Tumkur Zilla Panchayats. Hence this order.

**Government Order No: RDP 18 SJY 2004, Bangalore, Dated: 10th January 2005**

The State Government accords sanction for the release of II instalment of Rs.76,79,000/- (Rs. Seventy Six Lakh Seventy Nine thousand only) under SGSY for the year 2004-2005 to the following Zilla Panchayats. Subject to the following conditions.

| Sl. No. | Name of the Zilla Panchayat | ZP Code | DDO Code | II instalment of Central Share released | State share being released |
|---|---|---|---|---|---|
| 1 | Haveri | 463 | 2700ZZ0001 | 32,88,000 | 10,96,000 |
| 2 | Shimoga | 405 | 1400ZZ0002 | 79,56,000 | 26,52,000 |
| 3 | Tumkur | 406 | 0800ZZ0001 | 1,17,93,000 | 39,31,000 |
| | | | **Total** | **2,30,37,000** | **76,79,000** |

The amount should be utilised for the implementation of SGSY as per the guidelines of the SGSY Manual May 1999. The release to the implementing agency is to be made at any date within 15 days of the receipt of this G.O. without fail.

The funding pattern will be 75:25 between the Centre & the State.

The expenditure on the scheme is debitable to the Head of Account 2501-Spl.Programmes for Rural Development 01- Integrated Rural Development Programmes 196 Assistance to Zilla Panchayats 1-Zilla Panchayats -07 Swarna Jayanthi Grama Swarozgar Yojana-Plan 2004-2005 (2501-01-196-1-07).

The Chief Accounts Officers of the Haveri, Shimoga and Tumkur Zilla Panchayats are authorised to draw the amount as per rules.

The Deputy Secretaries (Dev) / Project Directors of Haveri, Shimoga and Tumkur Zilla Panchayats should submit the approved annual plan for 2004-2005.

The Monthly progress reports of physical and financial achievement should be sent to the Director (SEP), Rural Development and Panchayat Raj Department by the 10th of every succeeding month.

The Chief Accounts Officers of the Haveri, Shimoga and Tumkur Zilla Panchayats shall send the audited statement of accounts and utilisation certificate to the Director (SEP), & E/o Joint Secretary to Government, Rural Development & Panchayat Raj Dept.,

This order is issued with the concurrence of the I.F.A. concurrence No. RDP 5 PBS 05 dated 07.01.2005 and Unique No. 5 Dtd.10.1.2005 of R & I, RDPR Dept.

By Order and in the name of the Governor of Karnataka,

**B.M. SHIVAPRAKASH**

P.R. 109

Director (SEP), & E/o Joint Secretary to Govt.,
Rural Development and Panchayat Raj Department.

**ಕಾನೂನು ಸಚಿವಾಲಯ**

**ವಿಷಯ:** ಜಗಳೂರಿನ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 230 ಎಲ್‌ಎಸಿ 2002, ದಿನಾಂಕ: 19.3.2003.
2. ಸರ್ಕಾರಿ ಆದೇಶ ಸಂಖ್ಯೆ: ಲಾ 106 ಎಲ್‌ಎಸಿ 2003, ದಿನಾಂಕ: 28.7.2003.
3. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜೆಒಬಿ-2-395:2004, ದಿನಾಂಕ: 17.11.2004.

**ಪ್ರಸ್ತಾವನೆ:**

ಜಗಳೂರಿನ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1) ಮತ್ತು (2)ರ ಸರ್ಕಾರಿ ಆದೇಶಗಳಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 21.1.2005ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಹುದ್ದೆಗಳನ್ನು ದಿನಾಂಕ: 22.1.2005 ರಿಂದ ಎರಡು ವರ್ಷದ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 131 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2004**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಜಗಳೂರಿನ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 22.1.2005 ರಿಂದ ಎರಡು ವರ್ಷದ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 110

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ತಿದ್ದುಪಡಿ ಸಂ: ಸಿಆಸುಇ 5 ಸೇಅಸೆ 2005, ಬೆಂಗಳೂರು, ದಿನಾಂಕ: 7ನೇ ಜನವರಿ 2005**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಆಸುಇ 647 ಸೇಅಸೆ 2004 ದಿನಾಂಕ: 19.11.2004ರ ಕಂಡಿಕೆ 1ರಲ್ಲಿನ ಮೂರನೇ ಸಾಲಿನಲ್ಲಿರುವ "ಸ್ವಗ್ರಾಮ" ಎಂಬ ಪದವನ್ನು ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 111

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-1)

**ವಿಷಯ:** ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯಲ್ಲಿ ಜಂಟಿ ನಿರ್ದೇಶಕರ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002, ದಿನಾಂಕ: 7.3.2003.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002, ದಿನಾಂಕ: 3.6.2003.
3. ಆಡಳಿತಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಡಿ.ಡಿ.ಪಿ.ಇ.ಆರ್. ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಡಿಪಿಇಆರ್ 23 ಎಂಇಎ 2004 ದಿನಾಂಕ: 1.3.2004.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 7.3.2003ರ ಸರ್ಕಾರಿ ಆದೇಶದಲ್ಲಿ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯಲ್ಲಿ ಹೊಸದಾಗಿ 58 ವಿವಿಧ ದರ್ಜೆಯ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ. ಹಾಗೂ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 3.6.2003ರ ಸರ್ಕಾರಿ ಆದೇಶದಲ್ಲಿ ಒಂದು ಜಂಟಿ ನಿರ್ದೇಶಕರ ಹುದ್ದೆಯನ್ನು ದಿನಾಂಕ: 7.3.2003 ರಿಂದ ಒಂದು ವರ್ಷದ ಅವಧಿಗೆ ಸೃಜಿಸಲಾಗಿದ್ದಿತು. ಈ ಅವಧಿಯು ದಿನಾಂಕ: 6.3.2004ಕ್ಕೆ ಈಗಾಗಲೇ ಮುಕ್ತಾಯಗೊಂಡಿರುತ್ತದೆ.

ಆಡಳಿತಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಇವರ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಜಂಟಿ ನಿರ್ದೇಶಕರ ಹುದ್ದೆಯನ್ನು ದಿನಾಂಕ: 7.3.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 2004, ಬೆಂಗಳೂರು, ದಿನಾಂಕ: 6ನೇ ಜನವರಿ 2005**

ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯಲ್ಲಿ ಸೃಜಿಸಲಾಗಿರುವ ಜಂಟಿ ನಿರ್ದೇಶಕರ ಹುದ್ದೆಯನ್ನು ದಿನಾಂಕ: 7.3.2004 ರಿಂದ 6.3.2005 ರವರೆಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಸಿಆಸುಇ 1 ಟಿಎಫ್‌ಪಿ 96 ದಿನಾಂಕ: 10.9.1996 ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 112

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

**ವಿಷಯ:** ಶ್ರೀ ಕೆ.ಎ. ತಿಪ್ಪೇಸ್ವಾಮಿ, ಕೆ.ಎ.ಎಸ್. (ಆ.ಶ್ರೇ) ಅಧಿಕಾರಿ ಹಾಲಿ ಲೋಕೋಪಯೋಗಿ ಮತ್ತು ಇಂಧನ ಸಚಿವರ ಆಪ್ತ ಕಾರ್ಯದರ್ಶಿ ಇವರಿಗೆ ಸಚಿವರೊಡನೆ ದೆಹಲಿಗೆ ವಿಮಾನದಲ್ಲಿ ಪ್ರಯಾಣಿಸಲು ಅನುಮತಿ ನೀಡುವ ಬಗ್ಗೆ-ಆದೇಶ.

**ಓದಲಾಗಿದೆ:**
1. ಲೋಕೋಪಯೋಗಿ ಮತ್ತು ಇಂಧನ ಸಚಿವರ ಟಿಪ್ಪಣಿ ಸಂಖ್ಯೆ: MPW & E/N/7331/2004, ದಿನಾಂಕ: 10.12.2004.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:10.12.2004ರ ಟಿಪ್ಪಣಿಯಲ್ಲಿ ಲೋಕೋಪಯೋಗಿ ಮತ್ತು ಇಂಧನ ಸಚಿವರು ದಿನಾಂಕ:12.12.2004ರಂದು ಕೇಂದ್ರ ಸರ್ಕಾರದಲ್ಲಿ ಬಾಕಿ ಇರುವ ಪ್ರಸ್ತಾವನೆಗಳ ಕುರಿತು ಕೇಂದ್ರ ಸಚಿವರುಗಳನ್ನು ಬೇಟಿ ಮಾಡಲು ನವದೆಹಲಿಗೆ ಹೋಗುವ ಸಂದರ್ಭದಲ್ಲಿ ತಮಗೆ ಸಹಕರಿಸಲು ತಮ್ಮ ಆಪ್ತಕಾರ್ಯದರ್ಶಿ ಶ್ರೀ ಕೆ.ಎ. ತಿಪ್ಪೇಸ್ವಾಮಿ, ಕೆ.ಎ.ಎಸ್. (ಆ.ಶ್ರೇ) ಇವರೂ ಸಹ ವಿಮಾನದಲ್ಲಿ ಪ್ರಯಾಣಿಸಲು ಅನುಮತಿ ನೀಡುವಂತೆ ಕೋರಿಕೆ ಮಾಡಿಕೊಂಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 453 ಆಸೇಇ 2004, ಬೆಂಗಳೂರು, ದಿನಾಂಕ: 7ನೇ ಜನವರಿ 2005**

ಶ್ರೀ ಕೆ.ಎ. ತಿಪ್ಪೇಸ್ವಾಮಿ, ಕೆ.ಎ.ಎಸ್ (ಆ.ಶ್ರೇ) ಅಧಿಕಾರಿ ಹಾಲಿ ಲೋಕೋಪಯೋಗಿ ಮತ್ತು ಇಂಧನ ಸಚಿವರ ಆಪ್ತಕಾರ್ಯದರ್ಶಿ ಇವರು ದಿನಾಂಕ:12.12.2004ರಂದು ಸಚಿವರೊಂದಿಗೆ ನವದೆಹಲಿಗೆ ವಿಮಾನದಲ್ಲಿ ಪ್ರಯಾಣಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 113

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಕೃಷಿ ಆಯುಕ್ತರನ್ನು ಇಲಾಖಾ ಮುಖ್ಯಸ್ಥರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಕೃತೋಇ 69 ಕೃಪವ 98 ದಿನಾಂಕ:23.7.98.
2. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಪಿಎಆರ್ 422 ಎಸ್‌ಎಎಸ್ 2001 ದಿನಾಂಕ:8.3.2002.

**ಪ್ರಸ್ತಾವನೆ:**

ಕೃಷಿ ಇಲಾಖೆಯಲ್ಲಿ ನಿರ್ದೇಶಕರು ಹಾಗೂ ಅಪರ ಕೃಷಿ ನಿರ್ದೇಶಕರುಗಳ ಹುದ್ದೆಗಳಿಗೆ ಅತ್ಯಂತ ಹೆಚ್ಚು ಕೆಲಸವಿದ್ದು ಇಲಾಖೆಯು ಬಹಳಷ್ಟು ಬೆಳವಣಿಗೆಯಾಗಿರುವುದರಿಂದ ಇಲಾಖೆಯ ಕಾರ್ಯಕ್ರಮಗಳನ್ನು ನಿರ್ವಹಿಸುವ ಬಗ್ಗೆ ಇನ್ನು ಹೆಚ್ಚಿನ ದಕ್ಷತೆಯಿಂದ ಕೆಲಸ ಮಾಡಿ ರೈತರಿಗೆ ಅನೇಕ ಸೌಲಭ್ಯಗಳನ್ನು ಒದಗಿಸಲು ಹಾಗೂ ರಚನಾತ್ಮಕ ಸಲಹೆ ಸೂಚನೆ ಸಹಕಾರಗಳನ್ನು ಇಲಾಖೆಯು ಒದಗಿಸಬೇಕಾದುದನ್ನು ಮನಗಂಡು ನಿರ್ದೇಶಕರ ಹುದ್ದೆಗೆ ಮೇಲ್ಪಟ್ಟು ಒಬ್ಬ ಹಿರಿಯ ಭಾರತೀಯ ಸೇವೆಗಳ ವೃಂದದ ಅಧಿಕಾರಿಯನ್ನು ಇಲಾಖೆಯ ಸರ್ವತೋಮುಖ ಅಭಿವೃದ್ಧಿಗಾಗಿ ನೇಮಿಸುವುದು ಸೂಕ್ತವೆಂದು ಕಂಡುಬಂದ ಪ್ರಯುಕ್ತ ಕೃಷಿ ಆಯುಕ್ತರ ಹುದ್ದೆಯೊಂದನ್ನು ವೇತನ ಶ್ರೇಣಿ 18400-500-22400 ರಲ್ಲಿ ಭಾರತೀಯ ಆಡಳಿತ ಸೇವೆಯ ಅಧಿಕಾರಿಯ ಹುದ್ದೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೂರು ವರ್ಷಗಳ ಅವಧಿಗೆ ಸೃಜಿಸಿದ್ದು, ಸದರಿ ಹುದ್ದೆಯನ್ನು ಇದುವರೆವಿಗೂ ಮುಂದುವರೆಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅನಧಿಕೃತ ಟಿಪ್ಪಣಿಯಲ್ಲಿ ಸೃಜಿಸಿರುವ ಕೃಷಿ ಆಯುಕ್ತರ ಹುದ್ದೆಯನ್ನು "ಮೇಜರ್ ಹೆಡ್ಸ್ ಆಫ್ ಡಿಪಾರ್ಟ್‌ಮೆಂಟ್ಸ್" ಎಂದು ಘೋಷಿಸುವುದರಿಂದ, ಸದರಿ ಹುದ್ದೆಗೆ ಆರ್ಥಿಕ, ಆಡಳಿತಾತ್ಮಕ ಹಾಗೂ ಇಲಾಖಾ ಮುಖ್ಯಸ್ಥರ ಅಧಿಕಾರಗಳು ತಾನೇ ತಾನಾಗಿ ಬರುವುದರಿಂದ ಆರ್ಥಿಕ ಇಲಾಖೆ ಅನುಮೋದನೆ ಪಡೆದು "ಇಲಾಖಾ ಮುಖ್ಯಸ್ಥರೆಂದು" ಘೋಷಿಸಲು ತಿಳಿಸಿರುತ್ತಾರೆ.

**ಸರ್ಕಾರದ ಆದೇಶ ಸಂ:ಕೃತೋಇ 176 ಕೃಪಸೇ 2003, ಬೆಂಗಳೂರು, ದಿನಾಂಕ: 10ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೃಷಿ ಇಲಾಖೆಯಲ್ಲಿ ಸೃಜಿಸಿರುವ ಕೃಷಿ ಆಯುಕ್ತರ ಹುದ್ದೆಯನ್ನು "ಇಲಾಖಾ ಮುಖ್ಯಸ್ಥರೆಂದು" ಘೋಷಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 1167 ವೆಚ್ಚ-4:03 ದಿನಾಂಕ:29.10.2004 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 114

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎ.ವಿ.ದಿವಾಕರ್, ಹಿಂದಿನ ರಜೆ ಮೀಸಲಾತಿ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಬೀದರ್ ಜಿಲ್ಲೆ(ಪ್ರಸ್ತುತ ನಿಲಂಬನೆಯಲ್ಲಿದ್ದಾರೆ) ಇ ವರ ವಿರುದ್ಧ ಅನಧಿಕೃತ ಗೈರು ಹಾಜರಿ, ದುರ್ನಡತೆ ಹಾಗೂ ಕರ್ತವ್ಯಲೋಪಗಳ ಮೇಲೆ ಇ ಲಾಖಾ ವಿಚಾರಣೆ - ಇ ವರನ್ನು ಸೇವೆಯಿಂದ ವಜಾಗೊಳಿಸುವ ಬಗೆ

**ಓದಲಾಗಿದೆ:**

1. ದಿನಾಂಕ:24-4-95ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 31 ಎಡಿಇ 95.
2. ವಿಚಾರಣಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇ ವರ ದಿನಾಂಕ:27-3-1997ರ ವಿಚಾರಣಾ ವರದಿ ಸಂಖ್ಯೆ:ಡಿಸಿ.ಐಎ 4:95-96.
3. ದಿನಾಂಕ:16-9-2003ರ ಕಾರಣ ಕೇಳುವ ನೋಟೀಸು ಸಂಖ್ಯೆ:ಆರ್‌ಡಿ 85 ಎಡಿಇ 93.
4. ದಿನಾಂಕ:02-12-2002 ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 36 ಎಡಿಇ 98.
5. ದಿನಾಂಕ:14-12-2001ರ ಸರ್ಕಾರಿ ಆದೇಶ ಸಂಖ್ಯೆ:ಕಂಇ 115 ಎಡಿಇ 98.
6. ದಿನಾಂಕ:04-01-2004ರವಿಚಾರಣಾ ವರದಿ ಸಂಖ್ಯೆ:ಸಿಬ್ಬಂದಿ(1)ಸಿಸಿಎ:ಸಿಆರ್:7:2001-2002

**ಪ್ರಸ್ತಾವನೆ:**

ಶ್ರೀ ಎ.ವಿ.ದಿವಾಕರ್, ತಹಸೀಲ್ದಾರ್(ಹಾಲಿ ಅಮಾನತ್ತಿನಲ್ಲಿರುವವರು) ಇ ವರು ಹಿಂದೆ ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕೋರಮಂಗಲ ಗ್ರಾಮದ ಸ.ನಂ.103, 104 ಮತ್ತು 105ರ ಬಗ್ಗೆ ತಮಗೆ ಸಂಬಂಧವಿಲ್ಲದಿದ್ದರೂ ಸಹ ಪಹಣಿ ಪತ್ರಿಕೆಯಲ್ಲಿ ನಗರ ಸಭೆ ಹೆಸರನ್ನು ನಮೂದಿಸಿರುವುದನ್ನು ತಿದ್ದುಪಡಿ ಮಾಡಿಕೊಡುವಂತೆ, ಶ್ರೀ ಎಸ್.ಬಲ್‌ಬೀರ್‌ಸಿಂಗ್ ಎಂಬುವರು ದಿನಾಂಕ: 14-10-1993ರಂದು ಕೊಟ್ಟ ಅರ್ಜಿ ಆಧಾರದ ಮೇಲೆ ರೆಕಾರ್ಡ್ ಆಫ್ ರೈಟ್ಸ್, ಗೇಣಿ ಮತ್ತು ಪಹಣಿ ಪತ್ರಿಕೆ ಕಾಲಂ 11 ರಲ್ಲಿ ``ಅಕ್ವಿಜಿಷನ್ ಟು ಕಾರ್ಪೋರೇಷನ್'' ಎಂಬುದನ್ನು ದಿ:10-2-94 ರಲ್ಲಿ ವಜಾ ಮಾಡಿ, ಶ್ರೀ ಟಿ.ವಿ.ಕೃಷ್ಣ ಅಯ್ಯಂಗಾರ್ ರವರ ಹೆಸರನ್ನು ರೆಕಾರ್ಡ್ ಆಫ್ ರೈಟ್ಸ್, ಗೇಣಿ ಪತ್ರಿಕೆಯಲ್ಲಿ ಕಾಲಂ 9 ರಲ್ಲಿ ನಮೂದಿಸಿದ ಹಾಗೂ ಕೋರಮಂಗಲ ಗ್ರಾಮದ ಸರ್ವೆ ನಂ.107,108,109 ಮತ್ತು 110 ಖರಾಬ್ ಜಮೀನಾಗಿದ್ದು ರೆಕಾರ್ಡ ಆಫ್ ರೈಟ್ಸ ಗೇಣಿ ಮತ್ತು ಪಹಣಿ ಪತ್ರಿಕೆ ಕಾಲಂ 11ರಲ್ಲಿ ಅಕ್ವಿಜಿಷನ್ ಟು ಕಾರ್ಪೋರೇಷನ್ ಎಂಬುದನ್ನು ರದ್ದುಪಡಿಸಿ ಶ್ರೀ ಟಿ.ವಿ.ಕೃಷ್ಣ ಅಯ್ಯಂಗಾರ್ ರವರ ಹೆಸರನ್ನು ಮೇಲ್ಕಂಡ ಸರ್ವೆ ನಂಬರುಗಳಿಗೂ ಸಹ ನಮೂದು ಮಾಡಿ, ಕರ್ನಾಟಕ ಭೂ ಕಂದಾಯ ಕಾಯಿದೆ 1964 ರ ಪ್ರಕಾರ ತಹಸೀಲ್ದಾರರಿಗೆ ಪಹಣಿ ಪತ್ರಿಕೆಯಲ್ಲಿ ಈಗಾಗಲೇ ದಾಖಲು ಮಾಡಿರುವ ಹೆಸರುಗಳನ್ನು ತೆಗೆಯುವ ಅಧಿಕಾರವಿಲ್ಲದಿದ್ದರೂ, ದುರುದ್ದೇಶಪೂರ್ವಕವಾಗಿ ಅಕ್ರಮ ಆದೇಶವನ್ನು ಮಾಡಿ ಸರ್ಕಾರಿ: ಬೆಂಗಳೂರು ಮಹಾನಗರ ಪಾಲಿಕೆ ಜಮೀನುಗಳನ್ನು ಖಾಸಗಿ ವ್ಯಕ್ತಿಗಳಿಗೆ ಪರಭಾರೆ ಮಾಡಲು ಅವಕಾಶ ಮಾಡಿಕೊಟ್ಟ ಹಾಗೂ ದಿ:10-2-94 ಮತ್ತು 7-11-1994 ರಂದು ಆದೇಶ ಮಾಡುವಾಗ ಬೆಂಗಳೂರು ಮಹಾನಗರಪಾಲಿಕೆ ಹೆಸರು ಪಹಣಿ ಪತ್ರಿಕೆಯಲ್ಲಿ ನಮೂದು ಮಾಡಿದ್ದರೂ ಸಹ ಬೆಂಗಳೂರು ಮಹಾನಗರ ಪಾಲಿಕೆಗೆ ಯಾವುದೇ ನೋಟೀಸು ನೀಡದೇ ಕರ್ತವ್ಯಲೋಪ ಎಸಗಿರುವುದರಿಂದ, ಸದರಿಯವರ ಕರ್ತವ್ಯಲೋಪಗಳ ಬಗ್ಗೆ ಇ ಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:24-4-95ರ ಸರ್ಕಾರಿ ಆದೇಶದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಯವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರಂತೆ ವಿಚಾರಣೆ ಜರುಗಿಸಿರುವ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ:27-03-97 ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು ಶ್ರೀ ಎ.ವಿ.ದಿವಾಕರ್, ಇ ವರ ವಿರುದ್ಧದ ನಾಲ್ಕು ಆರೋಪಗಳು ಸಹ ಸಾಬೀತಾಗಿರುವುದರಿಂದ ಇ ವರಿಗೆ ಸೂಕ್ತವಾದ ದಂಡನೆಯನ್ನು ವಿಧಿಸುವುದು ಅವಶ್ಯಕವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಅಲ್ಲದೆ ಸಾರ್ವಜನಿಕ ಹಿತಾಸಕ್ತಿಗೆ ವಿರುದ್ಧವಾಗಿ ಅತ್ಯಂತ ಬೆಲೆ ಬಾಳುವ ಸರ್ಕಾರದ ಜಮೀನುಗಳ ಮೇಲೆ ಖಾಸಗಿ ವ್ಯಕ್ತಿಗಳು ಕಾನೂನು ಬಾಹಿರವಾಗಿ ಹಕ್ಕು ಸ್ಥಾಪಿಸಿ ಅಕ್ರಮ ಮಾರಾಟ ಮಾಡಲು ಶ್ರೀ ದಿವಾಕರ್ ರವರು ನೇರ ಕಾರಣಕರ್ತರಾಗಿರುತ್ತಾರೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿರುತ್ತಾರೆ.

ಶ್ರೀ ಎ.ವಿ.ದಿವಾಕರ್ ರವರು ಹಿಂದೆ ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿ ತಹಸೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಉತ್ತರಹಳ್ಳಿ ಹೋಬಳಿ ಕೆಂಬತ್ತಹಳ್ಳಿ ಗ್ರಾಮದಲ್ಲಿ ಸರ್ವೆ ನಂ.80ರಲ್ಲಿನ ಮೂರು ಎಕರೆ 15 ಗುಂಟೆ ಜಮೀನು ಶ್ರೀ ಸಿ.ಚಂದ್ರಮೋಹನ ರೆಡ್ಡಿ ಎಂಬುವವರ ಸ್ವತ್ತಾಗಿದ್ದು, ಸದರಿ ಜಮೀನಿನ ಬಗ್ಗೆ ವಿವಿಧ ನ್ಯಾಯಾಲಯಗಳಲ್ಲಿ ಪ್ರಕರಣಗಳು ಬಾಕಿಯಿದ್ದರೂ ಸಹ ಶ್ರೀ ಜಿ.ಮುನಿಯಪ್ಪ ಎಂಬುವವರ ಹೆಸರಿಗೆ ಆರ್.ಟಿ.ಸಿ. ಕಲಂ 12(2)ರಲ್ಲಿ ನಮೂದಿಸಲು ಆರ್.ಆರ್.ಟಿ (2) ವಿವಾದ 13:92-93 ದಿನಾಂಕ: 8-2-1994 ರಂತೆ ಆದೇಶ ಮಾಡಿರುವುದರಿಂದ ಕರ್ತವ್ಯಲೋಪ ಎಸಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು 1966 ರಡಿಯಲ್ಲಿನ ನಿಯಮ(3)ರಲ್ಲಿನ ಪರಂತುಕಗಳನ್ನು ಉಲ್ಲಂಘಿಸಿದ್ದರ ಮೇರೆಗೆ ಅವರ ವಿರುದ್ಧದ ದೋಷಾರೋಪಣೆ ಪಟ್ಟಿಗಳನ್ನೊಳಗೊಂಡ ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ದಿನಾಂಕ: 16-9-2003ರಂದು ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿತ್ತು. ಅದನ್ನು ಸದರಿ ಅಧಿಕಾರಿಯು ಸ್ವೀಕರಿಸಿದ್ದರೂ ಸಹ ಇ ದುವರೆಗೂ ಅವರ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ವಿಫಲರಾಗಿರುತ್ತಾರೆ.

ಶ್ರಿ ಎ.ವಿ.ದಿವಾಕರ್ ರವರು ಹಿಂದೆ ಆನೇಕಲ್ ತಾಲ್ಲೂಕಿನ ತಹಸೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಹಿಂದಿನ ಬೆಂಗಳೂರು ವಿಭಾಗಾಧಿಕಾರಿಯವರು ಸದರಿ ಕಛೇರಿಯನ್ನು ತಪಾಸಣೆ ನಡೆಸಿದ ಸಮಯದಲ್ಲಿ ಪ್ರತಿ ತಿಂಗಳು ನಾಲ್ಕು ಗ್ರಾಮ ಲೆಕ್ಕಿಗರ ಮತ್ತು ಒಬ್ಬ ರಾಜಸ್ವ

ನಿರೀಕ್ಷಕರ ದಫ್ತರ್ ತಪಾಸಣೆಯನ್ನು ಕಡ್ಡಾಯವಾಗಿ ನಡೆಸುವಂತೆ ಹಾಗೂ ಎರಡು ತಿಂಗಳಿಗೊಮ್ಮೆ ಒಂದು ನಾಡ ಕಛೇರಿಯನ್ನು ತಪಾಸಣೆ ಮಾಡಲು ಸೂಚಿಸಿದ್ದರೂ ಸಹ ಶ್ರೀ ಎ.ವಿ.ದಿವಾಕರ್ ರವರು ಯಾವುದೇ ಗ್ರಾಮ ಲೆಕ್ಕಿಗರ ಮತ್ತು ರಾಜಸ್ವ ನಿರೀಕ್ಷಕರ ದಫ್ತರ ತಪಾಸಣೆಯನ್ನು ಮಾಡಿರುವುದಿಲ್ಲವೆಂದು ಮತ್ತು ಸದರಿ ಆರೋಪಿತರು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಅಧಿಕಾರಿಯಾಗಿದ್ದು ಸರ್ಕಾರದ ಆದೇಶಗಳು, ಮಾರ್ಗಸೂಚಿಗಳು, ಮೇಲಾಧಿಕಾರಿಗಳ ಸೂಚನೆ/ನಿರ್ದೇಶನಗಳನ್ನು ಪಾಲಿಸುವುದು ಆದ್ಯ ಕರ್ತವ್ಯವಾಗಿದ್ದರೂ ಸಹ ಅದನ್ನು ನಿರ್ವಹಿಸದೆ ಸರ್ಕಾರಿ ಕೆಲಸದಲ್ಲಿ ಕರ್ತವ್ಯಚ್ಯುತಿ, ಬೇಜವಾಬ್ದಾರಿ ಮತ್ತು ನಿರ್ಲಕ್ಷತೆಯನ್ನು ತೋರಿ 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಾಮಾವಳಿಗಳ ನಿಯಮ 3ನ್ನು ಉಲ್ಲಂಘಿಸಿರುತ್ತಾರೆಂಬ ಕಾರಣಕ್ಕಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ:2-12-2002ರ ಸರ್ಕಾರಿ ಅದೇಶದಲ್ಲಿ ಇ ವರ ವಿರುದ್ಧ ವಿಚಾರಣೆಗೆ ಆದೇಶಿಸಲಾಗಿದೆ.

ಶ್ರೀ ಎ.ವಿ.ದಿವಾಕರ್ ಇ ವರು ಹಿಂದೆ ಬೆಂಗಳೂರು ನಗರ ಜಿಲ್ಲೆಯ ಅನೇಕಲ್ ತಾಲ್ಲೂಕಿನ ತಹಸೀಲ್ದಾರರಾಗಿದ್ದಾಗ ಅವರನ್ನು ಬೀದರ್ ಜಿಲ್ಲಾಧಿಕಾರಿಯವರ ಕಾರ್ಯಾಲಯದಲ್ಲಿ ರಜಾ ಮೀಸಲಾತಿ ತಹಸೀಲ್ದಾರ್ ಎಂದು ವರ್ಗಾಯಿಸಿ ನೇಮಿಸಲಾಗಿತ್ತು. ಅದರಂತೆ ಸದರಿ ಕಛೇರಿಯಲ್ಲಿ ದಿನಾಂಕ:7-3-98 ರಂದು ಕರ್ತವ್ಯಕ್ಕೆ ಹಾಜರಾಗಿ ದಿನಾಂಕ:9-3-1998 ರಿಂದ 28-3-1998ರವರೆಗೆ ವೈದ್ಯಕೀಯ ಕಾರಣಗಳ ಮೇಲೆ ರಜೆ ಅರ್ಜಿಯನ್ನು ಸಲ್ಲಿಸಿ ರಜೆ ಅರ್ಜಿಯೊಡನೆ ಪುಷ್ಟೀಕರಿಸುವಂತಹ ಯಾವುದೇ ವೈದ್ಯಕೀಯ ದಾಖಲೆಯನ್ನು ಸಲ್ಲಿಸದೆ, ಮೇಲಾಧಿಕಾರಿಯವರ ಅನುಮತಿ ಪಡೆಯದೆ ಮತ್ತು ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ಕೇಂದ್ರಸ್ಥಾನವನ್ನು ಬಿಟ್ಟಿರುವುದು ಹಾಗೂ ದಿನಾಂಕ:28-3-98ರ ನಂತರ ರಜೆ ವಿಸ್ತರಿಸಿ ಕೊಳ್ಳುವ ಬಗ್ಗೆ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೆ ಅನಧಿಕೃತವಾಗಿ ಗೈರು ಹಾಜರಾಗಿದ್ದ ಹಿನ್ನೆಲೆಯಲ್ಲಿ ಇ ವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ದಿನಾಂಕ:4-2-2001ರ ಸರ್ಕಾರಿ ಆದೇಶದಲ್ಲಿ ಬೆಂಗಳೂರು ನಗರ ಜಿಲ್ಲಾಧಿಕಾರಿಯವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಸದರಿ ವಿಚಾರಣೆಯಲ್ಲಿ ಆರೋಪಿತ ಅಧಿಕಾರಿಯು ಸಲ್ಲಿಸಿರುವ ಲಿಖಿತ ಹೇಳಿಕೆಯಲ್ಲಿ ಉದ್ದೇಶಿತ ರಜೆ ಮುಗಿದ ಬಳಿಕ ಸೇವೆಯಲ್ಲಿ ಮುಂದುವರೆಯಲು ಇ ಷ್ಟವಿಲ್ಲದಿರುವುದರಿಂದ ಹಾಗೂ ತಮ್ಮ ಆರೋಗ್ಯದ ಹಿತದೃಷ್ಟಿಯಿಂದ ಕರ್ತವ್ಯ ನಿರ್ವಹಿಸಲು ಸಾಧ್ಯವಿಲ್ಲದಿರುವುದರಿಂದ ತಮ್ಮ ಹುದ್ದೆಗೆ ರಾಜೀನಾಮೆಯನ್ನು ನೀಡಿರುವುದಾಗಿ ತಿಳಿಸಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿರುವ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿನಾಂಕ: 4-1-2004ರ ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಆರೋಪಿತ ಅಧಿಕಾರಿಯಾದ ಶ್ರೀ ದಿವಾಕರ್ ರವರು ದಿನಾಂಕ:29-3-1998ರಿಂದ ಸರ್ಕಾರಿ ನೌಕರಿಯಲ್ಲಿ ಗೈರು ಹಾಜರಾಗಿರುತ್ತಾರೆ ಹಾಗೂ ಇ ದನ್ನು ಸ್ವತ: ಶ್ರೀ ದಿವಾಕರ್‌ರವರೆ ಒಪ್ಪಿಕೊಂಡಿರುವುದರಿಂದ ಅವರ ವಿರುದ್ಧದ ಆರೋಪಗಳು ಸಾಬೀತಾಗಿರುವುದೆಂದು ಸಮರ್ಥಿಸಿರುತ್ತಾರೆ. ಮುಂದುವರೆದು, ದಿನಾಂಕ: 29.3.1998ರಿಂದ ತಹಲ್‌ವರೆವಿಗೆ ಸದರಿ ಆರೋಪಿತ ಅಧಿಕಾರಿಯು ತನ್ನ ಹುದ್ದೆಗೆ ಹಾಜರಾಗಿಲ್ಲವೆಂದು ಒಪ್ಪಿಕೊಂಡಿದ್ದು, ದಿನಾಂಕ:24.9.1998ರಂದು ತಮ್ಮ ರಾಜಿನಾಮೆ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸಿರುವುದಾಗಿ ತಿಳಿಸಿದ್ದರೂ ಸಹ ಅವರ ವಿರುದ್ಧದ ಗಂಭೀರ ಸ್ವರೂಪದ ಆರೋಪಣೆಗಳ ಮೇಲೆ ಸರ್ಕಾರದ ಮಟ್ಟದಲ್ಲಿ ಅನೇಕ ಇ ಲಾಖಾ ವಿಚಾರಣೆಗಳು ಬಾಕಿಯಿರುವುದರಿಂದ ಇ ವರ ರಾಜಿನಾಮೆಯನ್ನು ಅಂಗೀಕರಿಸಲು ಸಾಧ್ಯವಿರುವುದಿಲ್ಲವೆಂಬ ತೀರ್ಮಾನಕ್ಕೆ ಬಂದಿರುವುದರಿಂದ ಸದರಿ ಅಧಿಕಾರಿಯು ದಿನಾಂಕ:29-3-1998 ರಿಂದ ಇ ಂದಿನವರೆಗೆ ಅನಧಿಕೃತವಾಗಿ ನಾಲ್ಕು ತಿಂಗಳಿಗಿಂತಲೂ ಹೆಚ್ಚು ಅವಧಿ ತಮ್ಮ ಹುದ್ದೆಗೆ ಗೈರು ಹಾಜರಾಗಿರುವುದು ಸ್ಪಷ್ಟವಿರುವುದರಿಂದ ಹಾಗೂ ಸದರಿ ಅಧಿಕಾರಿಯು ಸೇವೆಯಿಂದ ಅಮಾನತ್ತಿನಲ್ಲಿ ಇ ದ್ದುದರಿಂದ ಅವರು ಸರ್ಕಾರಿ ನೌಕರರೆಂದೇ ಪರಿಗಣಿಸಬೇಕಾಗಿರುವ ಹಿನ್ನೆಲೆಯಲ್ಲಿ ಸದರಿ ಆಪಾದಿತ ಅಧಿಕಾರಿಯ ವಿರುದ್ಧದ ಆರೋಪಗಳು ಸಾಬೀತಾಗಿರುತ್ತವೆ.

ಶ್ರೀ ದಿವಾಕರ್ ಇ ವರ ಅನಧಿಕೃತ ಗೈರು ಹಾಜರಿಯ ಗಂಭೀರ ಸ್ವರೂಪದ ಆರೋಪದ ಹಿನ್ನೆಲೆಯಲ್ಲಿ ಇ ವರ ರಾಜಿನಾಮೆಯನ್ನು ಅಂಗೀಕರಿಸಲು ಸಾಧ್ಯವಿಲ್ಲವೆಂದು ತೀರ್ಮಾನಿಸಿ ಇ ವರಿಗೆ ಸೂಕ್ತ ಹಿಂಬರಹ ನೀಡುವಂತೆ ಬೀದರ್ ಜಿಲ್ಲಾಧಿಕಾರಿಯವರಿಗೆ ನಿರ್ದೇಶನ ನೀಡಲಾಗಿರುತ್ತದೆ. ಅಲ್ಲದೆ ಇ ಂತಹ ಗುರುತರವಾದ ಕರ್ತವ್ಯಚ್ಯುತಿಯಿಂದಾಗಿ ಶ್ರೀ ಎ.ವಿ.ದಿವಾಕರ್ ಇ ವರನ್ನು ದಿನಾಂಕ:9-12-1998ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 118 ಎಡಿಇ 98 ರನ್ವಯ ಸೇವೆಯಿಂದ ಅಮಾನತ್ತಿನಲ್ಲಿ ಇ ಡಲಾಗಿರುತ್ತದೆ ಹಾಗೂ ಸದರಿ ಅಮಾನತ್ತಿನ ಅವಧಿ ಇ ಂದಿಗೂ ಸಹ ಮುಂದುವರೆದಿರುತ್ತದೆ.

ರಜೆ ಮಂಜೂರಾತಿ ಪಡೆಯದೆ ಕರ್ತವ್ಯದಿಂದ ಗೈರು ಹಾಜರಾಗಿರುವುದು ಒಂದು ತೀವ್ರ ಸ್ವರೂಪದ ದುರ್ನಡತೆಯಾಗಿರುತ್ತದೆ. ರಜೆ ಮಂಜೂರಾತಿಯನ್ನು ಪಡೆಯದೆ ಕರ್ತವ್ಯಕ್ಕೆ ಗೈರು ಹಾಜರಾದಲ್ಲಿ ಅದು ಅನಧಿಕೃತ ಗೈರು ಹಾಜರಾಗಿದೆಯೇ ಹೊರತು ಅಧಿಕೃತವೆಂದು ಪರಿಗಣಿಸುವಂತಿಲ್ಲ. ರಜೆ ಅರ್ಜಿಯನ್ನು ನೀಡಿದಾಕ್ಷಣ ರಜೆ ಮಂಜೂರು ಮಾಡಿದಂತಾಗುವುದಿಲ್ಲ. ಅದನ್ನು ಸಕ್ಷಮ ಪ್ರಾಧಿಕಾರಿಯಿಂದ ಮಂಜೂರು ಮಾಡಿಸಿಕೊಂಡ ನಂತರವೇ ರಜೆಯನ್ನು ಉಪಯೋಗಿಸಿಕೊಳ್ಳಬೇಕು. ಪ್ರತಿಯೊಬ್ಬ ಸರ್ಕಾರಿ ನೌಕರರು ಕರ್ತವ್ಯ ನಿರತರಾಗಬೇಕು ಅಥವಾ ರಜೆ ಮಂಜೂರಾತಿಯನ್ನು ಪಡೆದು ರಜೆಯನ್ನು ಬಳಸಿಕೊಳ್ಳಬಹುದು. ಸೇವೆಯಿಂದ ಗೈರು ಹಾಜರಾಗಿರುವುದು ಅನಧಿಕೃತವಾಗಿರುತ್ತದೆ. ಅವರ ವರ್ತನೆಯನ್ನು ವಿಶ್ಲೇಷಿಸಿದಲ್ಲಿ 1966ರ ಕರ್ನಾಟಕ ನಾಗರೀಕ ಸೇವಾ(ನಡತೆ) ನಿಯಮಾವಳಿಯ 3ನೇ ನಿಯಮದಲ್ಲಿ ಪ್ರತಿಯೊಬ್ಬ ಸರ್ಕಾರಿ ನೌಕರರು ಹೊಂದಿರಬೇಕಾದ ಅತ್ಯಂತ ಶ್ರದ್ಧೆ, ಭಕ್ತಿ, ಆಸಕ್ತಿ, ನೀತಿ ಮತ್ತು ನಿಷ್ಠೆಯನ್ನು ಹೊಂದಿರಲಿಲ್ಲವೆಂಬುದು ವೇದ್ಯವಾಗುತ್ತದೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 107 ರಡಿಯಲ್ಲಿ ರಜೆಯನ್ನು ಹಕ್ಕು ಎಂದು ಪರಿಗಣಿಸತಕ್ಕದ್ದಲ್ಲ ಅದನ್ನು ಮಂಜೂರು ಮಾಡುವ ಅಥವಾ ತಿರಸ್ಕರಿಸುವ ಹಕ್ಕು ಸಕ್ಷಮ ಪ್ರಾಧಿಕಾರಕ್ಕೆ ಅಧಿಕಾರವಿರುತ್ತದೆ. ರಜೆ ಮಂಜೂರು ಆಗದೆ ಕರ್ತವ್ಯದಿಂದ ಗೈರು ಹಾಜರಾದಲ್ಲಿ ಅದನ್ನು ಸದರಿ ನಿಯಮಾವಳಿಯ 106-ಎ ನಿಯಮದಡಿ ವೇತನ ರಹಿತ ಭತ್ಯೆ ರಜೆ(ಎಲ್.ಡಬ್ಲ್ಯು.ಎ) ಎಂದು ಪರಿಗಣಿಸಿ ಶಿಸ್ತಿನ ಕ್ರಮ ಕೈಗೊಳ್ಳಲು ಮತ್ತು ಸದರಿ ನಿಯಮಾವಳಿಗಳ ನಿಯಮ 108 ರೊಂದಿಗೆ ಓದಲಾದ ದಿನಾಂಕ:14-9-2001ರ ಸುತ್ತೋಲೆ ಸಂಖ್ಯೆ:ಸಿಆಸುಇ 18 ಸೇವಿಇ 2001ರ ಪ್ರಕಾರ ಅಂತಹ ಗೈರು ಹಾಜರಾದ ಅವಧಿಯು ನಾಲ್ಕು ತಿಂಗಳು ಮೀರಿದಲ್ಲಿ ಸೇವೆಯಿಂದ ವಜಾ ಮಾಡುವ ಅಥವಾ ತೆಗೆದು ಹಾಕುವ ದಂಡನೆಯನ್ನು ವಿಧಿಸಲು ಅವಕಾಶವಿರುವುದರಿಂದ ಹಾಗೂ ಸದರಿ ಆಪಾದಿತ ಅಧಿಕಾರಿಯ ವಿರುದ್ಧದ ಇ ತರೆ ಗುರುತರವಾದ ಆರೋಪಗಳ ಹಿನ್ನೆಲೆಯಲ್ಲಿ ಅವರನ್ನು ಸೇವೆಯಿಂದ ವಜಾ **ಮಾಡುವ ದಂಡನೆಯನ್ನು ವಿಧಿಸುವುದು ಅತ್ಯಂತ ಸಮಂಜಸ ಮತ್ತು ಸಮರ್ಥನೀಯವೆಂದು ಸರ್ಕಾರವು ಭಾವಿಸಿ ಈ ಕೆಳಕಂಡಂತೆ ಆದೇಶಿಸಿದೆ.**

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 31 ಎಡಿಇ 95, ಬೆಂಗಳೂರು, ದಿನಾಂಕ: 13ನೇ ಜನವರಿ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 8(viii)ನೇ ನಿಯಮದೊಂದಿಗೆ ಓದಲಾದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ 108ನೇ ನಿಯಮದಡಿ ಅನಧಿಕೃತ ಗೈರು ಹಾಜರಿಯಲ್ಲಿದ್ದ ಮತ್ತು ಹಾಲಿ ಸೇವೆಯಿಂದ ನಿಲಂಬನೆಯಲ್ಲಿರುವ ಶ್ರೀ ಎ.ವಿ. ದಿವಾಕರ್, ಹಿಂದಿನ ತಹಶೀಲ್ದಾರ್ (ರಜೆ ಮೀಸಲಾತಿ) ಜಿಲ್ಲಾಧಿಕಾರಿಯವರ ಕಛೇರಿ, ಬೀದರ್ ಇವರ ಮೇಲೆ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರವು ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಅವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಶ್ರೀ ಎ.ವಿ. ದಿವಾಕರ್ ಇವರಿಂದ ಸರ್ಕಾರಕ್ಕೆ ಉಂಟಾಗಿರುವ/ಉಂಟಾಗಬಹುದಾದ ಆರ್ಥಿಕ ನಷ್ಟವನ್ನು ವಸೂಲಿ ಮಾಡಲು ಇವರ ವಿರುದ್ಧ ಸಕ್ಷಮ ನಾಯಾಲಯದಲ್ಲಿ ಸಿವಿಲ್ ಮೊಕದ್ದಮೆ ಹೂಡಿ ವಸೂಲು ಮಾಡಲು ಹಾಗೂ ಇವರ ಕಾನೂನುಬಾಹಿರ ಚಟುವಟಿಕೆಗಳ ಬಗ್ಗೆ ಇವರ ಮೇಲೆ ಕ್ರಿಮಿನಲ್ ಮೊಕದ್ದಮೆ ಹೂಡಲು ಸಕ್ಷಮ ಪ್ರಾಧಿಕಾರಿಗಳಾದ ಬೆಂಗಳೂರು ನಗರ, ಗ್ರಾಮಾಂತರ ಹಾಗೂ ಬೀದರ್ ಜಿಲ್ಲಾಧಿಕಾರಿಗಳು ಕ್ರಮ ಕೈಗೊಳ್ಳತಕ್ಕದ್ದು.

ಶ್ರೀ ಎ.ವಿ. ದಿವಾಕರ್ ಇವರನ್ನು ದಿನಾಂಕ:9.12.1998ರಿಂದ ಇಂದಿನವರೆಗೆ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿರುವ ಅವಧಿಯನ್ನು ಅಮಾನತ್ತುಗೊಳಿಸಲಾದ ಅವಧಿಯೆಂದೇ ಪರಿಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 115

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

**ತಿದ್ದುಪಡಿ ಸಂಖ್ಯೆ:ಕಂಇ 124 ಭೂಸು 2004, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 126 ಎಲ್‌ಆರ್‌ಎಂ 2003 ದಿನಾಂಕ: 18.8.2004 ರಲ್ಲಿ ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕು ಬ್ಯಾಡಗಿ ಗ್ರಾಮದ "ರಿ.ಸ.ನಂ. 152" ಇದ್ದು ಅದರ ಬದಲಾಗಿ "ಸರ್ವೆ ನಂ: 152/1ಎ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 116

**ಕೆ. ನರಸಿಂಹಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಸುಧಾರಣೆ)

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ:** ತೋಟಗಾರಿಕೆ ಇಲಾಖೆಯ ಫೀಲ್ಡ್ ಅಸಿಸ್ಟೆಂಟ್ ವೃಂದವನ್ನು ತೋಟಗಾರಿಕೆ ಸಹಾಯಕರ ವೃಂದದೊಂದಿಗೆ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ತೋಟಗಾರಿಕೆ ನಿರ್ದೇಶಕರ ಪತ್ರಸಂಖ್ಯೆ:ತೋಇ:ಅ:ಸಿ:ವಿನಿ4:85:04-05, ದಿನಾಂಕ:25.11.2004.
2. ಸರ್ಕಾರದ ಅಧಿಸೂಚನೆ ಸಂಖ್ಯೆ:ಎಎಹೆಚ್ 137 ಎಇಜಿ 71, ದಿನಾಂಕ:16.8.1975.

**ಪ್ರಸ್ತಾವನೆ:**

ತೋಟಗಾರಿಕೆ ಸಹಾಯಕರ ನೇರ ನೇಮಕಾತಿ ಪ್ರಸ್ತಾವನೆಯನ್ನು ಪರಿಗಣಿಸುವ ಸಂದರ್ಭದಲ್ಲಿ ತೋಟಗಾರಿಕೆ ಸಹಾಯಕರ/ಫೀಲ್ಡ್ ಅಸಿಸ್ಟೆಂಟ್ ನೇಮಕಾತಿ ಕುರಿತಂತೆ ವಿರೋಧಾಭಾಸ ಇರುವುದರಿಂದ ಈ ಹುದ್ದೆಗಳೆರಡನ್ನು ವಿಲೀನಗೊಳಿಸಿ ಒಂದು ಕಾರ್ಯಕಾರಿ ಆದೇಶ ಹೊರಡಿಸುವ ಬಗ್ಗೆ ಪರಿಶೀಲಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅಧ್ಯಕ್ಷರು ಶಿಫಾರಸ್ಸು ಮಾಡಿರುತ್ತಾರೆ. ಈ ಕುರಿತಂತೆ ಮೇಲೆ (1)ರಲ್ಲಿ ಓದಲಾದ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ 1977ರ ಪರಿಷ್ಕೃತ ವೇತನ ಶ್ರೇಣಿಯಲ್ಲಿ ತೋಟಗಾರಿಕೆ ಸಹಾಯಕರ ಹಾಗೂ ಫೀಲ್ಡ್ ಅಸಿಸ್ಟೆಂಟ್ ಹುದ್ದೆಗಳ ವೇತನವನ್ನು ಒಟ್ಟುಗೂಡಿಸಿ ಸಮಾನಾಂತರಗೊಳಿಸಿ ಒಂದೇ ವೇತನ ಶ್ರೇಣಿ ರೂ.340-800ಗಳಿಗೆ ನಿಗದಿಪಡಿಸಲಾಗಿದೆ. ಫೀಲ್ಡ್ ಅಸಿಸ್ಟೆಂಟ್ ಹುದ್ದೆಯನ್ನು ತೋಟಗಾರಿಕೆ ಸಹಾಯಕ ಎಂದೇ ಕರೆಯಲಾಗಿರುತ್ತದೆ. ಹಾಲಿ ಈ ಹುದ್ದೆಯ ಪದನಾಮದಲ್ಲಿ ಯಾರು ಕರ್ತವ್ಯ ನಿರ್ವಹಿಸದೇ ಇರುವುದರಿಂದ ಹಾಗೂ ತೋಟಗಾರಿಕೆ ಸಹಾಯಕರ ನೇರ ನೇಮಕಾತಿಗೆ ಈ ತಿದ್ದುಪಡಿ ಅತ್ಯವಶ್ಯಕವಾಗಿರುವುದರಿಂದ ಫೀಲ್ಡ್ ಅಸಿಸ್ಟೆಂಟ್ ಹುದ್ದೆಯನ್ನು ತೋಟಗಾರಿಕೆ ಸಹಾಯಕರ ಹುದ್ದೆಗಳೊಂದಿಗೆ ವಿಲೀನಗೊಳಿಸಿ, ಕಾರ್ಯಕಾರಿ ಆದೇಶವನ್ನು ಹೊರಡಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕೃತೋಇ 149 ತೋಸಿಸೇ 2004, ಬೆಂಗಳೂರು, ದಿನಾಂಕ: 15ನೇ ಜನವರಿ 2005**

ತೋಟಗಾರಿಕೆ ಸಹಾಯಕರ ವೃಂದಕ್ಕೆ ನೇಮಕಾತಿ ವಿಧಾನವನ್ನು ಈಗಾಗಲೇ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಪಡಿಸಲಾಗಿದ್ದು, ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಫೀಲ್ಡ್ ಅಸಿಸ್ಟೆಂಟ್ ವೃಂದವನ್ನು ತೋಟಗಾರಿಕೆ ಸಹಾಯಕರ ವೃಂದದೊಂದಿಗೆ ವಿಲೀನಗೊಳಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಸಿ.ಆ.ಸು.ಇಲಾಖೆ (ಸೇವಾ ನಿಯಮ) ಶಾಖೆಯು ದಿನಾಂಕ:24.12.2004ರಂದು ಸಂಖ್ಯೆ:ಸಿಆಸುಇ 84 ಸೇನಿಇ 2004ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 117

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಬೆಂಗಳೂರು ಸುತ್ತಮುತ್ತಲಿನ ಆರ್ಥಿಕವಾಗಿ ಅಭಿವೃದ್ಧಿಗೊಳ್ಳುತ್ತಿರುವ ಮುಖ್ಯ ರಸ್ತೆಗಳ ಕಾಮಗಾರಿಗಳ ಗುಣ ನಿಯಂತ್ರಣಕ್ಕೆ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:**
1. ಬೆಂಗಳೂರು ಸುತ್ತಮುತ್ತಲಿನ ಆರ್ಥಿಕವಾಗಿ ಅಭಿವೃದ್ಧಿಗೊಳ್ಳುತ್ತಿರುವ ಮುಖ್ಯ ರಸ್ತೆಗಳ ಕಾಮಗಾರಿಗಳನ್ನು ಕೈಗೊಳ್ಳಲು ರಚಿಸಿರುವ ಸಮಿತಿಯ ಮೊದಲ ಸಭೆಯ ನಡವಳಿ ಸಂಖ್ಯೆ.ಎಡಿವಿಪಿಡಬ್ಲ್ಯು ಅಂಡ್ ಇ/61/04-05 ದಿನಾಂಕ: 7.10.2004.
2. ಸರ್ಕಾರದ ದಿನಾಂಕ 24.12.2004ರ ಸಮಸಂಖ್ಯೆ ಆದೇಶ

**ಪ್ರಸ್ತಾವನೆ:**

ಸರ್ಕಾರದ ಆದೇಶ ದಿನಾಂಕ: 25.9.2004 ರಲ್ಲಿ ಮಾನ್ಯ ಲೋಕೋಪಯೋಗಿ ಹಾಗೂ ಇಂಧನ ಸಚಿವರ ಸಲಹೆಗಾರರ ಅಧ್ಯಕ್ಷತೆಯಲ್ಲಿ ಇತರೆ ಇಲಾಖೆಗಳ ಅಧಿಕಾರಿಗಳ ಸದಸ್ಯರೊಂದಿಗೆ ಒಂದು ಸಮಿತಿಯನ್ನು ರಚಿಸಲಾಗಿದೆ.

ಸಮಿತಿಯ ಮೊದಲನೇ ಸಭೆಯು ದಿನಾಂಕ: 5.10.2004 ರಂದು ನಡೆದಿದ್ದು, ಈ ಕೆಳಕಂಡ 3 ರಸ್ತೆಗಳನ್ನು ಖಾಸಗಿ ಸಹಭಾಗಿತ್ವದೊಂದಿಗೆ ಅಭಿವೃದ್ಧಿಗೊಳಿಸಲು ತೀರ್ಮಾನಿಸಲಾಗಿದೆ.

ಅ) ಬೆಂಗಳೂರು-ವರ್ತೂರು ರಸ್ತೆ ಪ್ರಾರಂಭದ ಕುಂದನಹಳ್ಳಿ ಕ್ರಾಸ್‌ನಿಂದ ಸಾಯಿಬಾಬ ಆಶ್ರಮದವರೆಗೆ - (8.27 ಕಿಮೀ.)

ಆ) ಬನ್ನೇರುಘಟ್ಟ ರಸ್ತೆಯಿಂದ ಮೀನಾಕ್ಷಿ ದೇವಾಲಯದ ಹೊರ ವರ್ತುಲ ರಸ್ತೆ - (4.00 ಕಿಮೀ.)

ಇ) ಸರ್ಜಾಪುರ ರಸ್ತೆಯಿಂದ ಹೊರ ವರ್ತುಲ ರಸ್ತೆಯ ರೈಲ್ವೆ ಕ್ರಾಸಿಂಗ್ - (4.2 ಕಿಮೀ)

ಈ ಮೇಲಿನ ಮೂರು ರಸ್ತೆಗಳ ಕಾಮಗಾರಿಗಳ ಗುಣವನ್ನು ನಿಯಂತ್ರಿಸಲು ಹಾಗೂ ಮಾನಿಟರಿಂಗ್ ಮಾಡಲು ಒಂದು ಗುಣನಿಯಂತ್ರಣ ಹಾಗೂ ಮಾನಿಟರಿಂಗ್ ವಿಂಗ್‌ನ್ನು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಚಿಸಲು ಶಿಫಾರಸ್ಸು ಮಾಡಲಾಗಿದೆ.

| | | | |
|---|---|---|---|
| ಅ) | ಪ್ರೊಫೆಸರ್ ಜಸ್ಟೊ | - | ಪ್ರೊಫೆಸರ್ ಎಮರಿಟಿಸ್, ಬೆಂಗಳೂರು ವಿಶ್ವವಿದ್ಯಾನಿಲಯ |
| ಆ) | ಶ್ರೀ ಆರ್.ಕೆ. ಮಿಶ್ರಾ | - | ಸಮನ್ವಯಾಧಿಕಾರಿ, ಪಬ್ಲಿಕ್- ಪ್ರೈವೇಟ್ ಪಾರ್ಟ್‌ನರ್‌ಶಿಪ್ ಇನಿಶಿಯೇಶನ್ |
| ಇ) | ಶ್ರೀ ಎಂ. ನಾಗರಾಜ್ | - | ಕಾರ್ಯಪಾಲಕ ಇಂಜಿನಿಯರ್, ಗುಣ ನಿಯಂತ್ರಣ ವಿಭಾಗ, ಲೋಕೋಪಯೋಗಿ ಇಲಾಖೆ, ಬೆಂಗಳೂರು. |
| ಈ) | ಶ್ರೀ ಕಿನಿ | - | ಕಾರ್ಯಪಾಲಕ ಇಂಜಿನಿಯರ್, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ವಿಭಾಗ, ಬೆಂಗಳೂರು. |

ಓದಲಾದ (2) ರಲ್ಲಿನ ಸರ್ಕಾರಿ ಆದೇಶದಲ್ಲೂ ಈ ರಸ್ತೆ ಕಾಮಗಾರಿಗಳ ನಿರ್ಮಾಣದ ಗುಣಮಟ್ಟದ ಗುಣ ಪರಿವೀಕ್ಷಣೆಯನ್ನು ಇದಕ್ಕಾಗಿಯೇ ನಿಯೋಜಿಸಲಾಗಿರುವ ಥರ್ಡ್ ಪಾರ್ಟಿ ಏಜೆನ್ಸಿ (third party agency) ಹಾಗೂ ಲೋಕೋಪಯೋಗಿ ಇಲಾಖೆ ಮೂಲಕ ಕಾಲಕಾಲಕ್ಕೆ ಕಟ್ಟುನಿಟ್ಟಾಗಿ ಮೇಲ್ವಿಚಾರಣೆ ಮಾಡಬೇಕೆಂದಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 7 ಇಎಪಿ 2004, ಬೆಂಗಳೂರು, ದಿನಾಂಕ: 12ನೇ ಜನವರಿ 2005**

1. ಮೇಲಿನ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಿದ್ದು, ನಿರ್ಮಾಣ ಗುಣಮಟ್ಟದ ಪರಿವೀಕ್ಷಣೆಯನ್ನು ಮಾಡಲು ಒಂದು ಮಾನಿಟರಿಂಗ್ ವಿಂಗ್‌ನ್ನು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡಂತೆ ರಚಿಸಲಾಗಿದೆ.

| | | | |
|---|---|---|---|
| ಅ) | ಪ್ರೊಫೆಸರ್ ಜಸ್ಟೊ | - | ಪ್ರೊಫೆಸರ್ ಎಮರಿಟಿಸ್, ಬೆಂಗಳೂರು ವಿಶ್ವವಿದ್ಯಾನಿಲಯ |
| ಆ) | ಶ್ರೀ ಆರ್.ಕೆ. ಮಿಶ್ರಾ | - | ಸಮನ್ವಯಾಧಿಕಾರಿ, ಪಬ್ಲಿಕ್- ಪ್ರೈವೇಟ್ ಪಾರ್ಟ್‌ನರ್‌ಶಿಪ್ ಇನಿಶಿಯೇಶನ್ |
| ಇ) | ಶ್ರೀ ಎಂ. ನಾಗರಾಜ್ | - | ಕಾರ್ಯಪಾಲಕ ಇಂಜಿನಿಯರ್, ಗುಣ ನಿಯಂತ್ರಣ ವಿಭಾಗ, ಲೋಕೋಪಯೋಗಿ ಇಲಾಖೆ, ಬೆಂಗಳೂರು. |
| ಈ) | ಶ್ರೀ ಕಿನಿ | - | ಕಾರ್ಯಪಾಲಕ ಇಂಜಿನಿಯರ್, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ವಿಭಾಗ, ಬೆಂಗಳೂರು. |

2. ಮಾನಿಟರಿಂಗ್ ಹಾಗೂ ಗುಣ ಪರಿವೀಕ್ಷಣಾ ವಿಂಗ್ ವಾರಕ್ಕೊಂದು ಬಾರಿ ವರದಿಯನ್ನು ಲೋಕೋಪಯೋಗಿ ಇಲಾಖೆ ಕಾರ್ಯದರ್ಶಿಯವರಿಗೆ ತಪ್ಪದೇ ಸಲ್ಲಿಸುವುದು.
3. ಈ ಕಾಮಗಾರಿಗಳ ಪ್ರಗತಿಯ ಬಗ್ಗೆ ಹಾಗೂ ಗುಣನಿಯಂತ್ರಣದ ವರದಿಯನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ರವರೊಂದಿಗೆ ವಾರಕ್ಕೊಮ್ಮೆ ಪರಿಶೀಲಿಸುವುದು ಹಾಗೂ ಈ ಬಗ್ಗೆ ಲೋಕೋಪಯೋಗಿ ಇಲಾಖೆ ಕಾರ್ಯದರ್ಶಿಯವರು ಹದಿನೈದು ದಿನಕ್ಕೊಮ್ಮೆ ಪರಿಶೀಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎ. ವಿಜಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ. (ಇಎಪಿ)

**PUBLIC WORKS SECRETARIAT**

**Sub:** Formation of a quality control and Monitoring wing for quality assurance for the improvement of economically important roads in and around Bangalore.

**Read:**
1. Proceedings of the First Meeting of the Committee constituted for recommending the above works No.ADV/PW&E/61/04-05 dated 7.10.2004.
2. Government Order No. PWD/7/EAP/2004 dated 24.12.2004.

**Preamble:-**

Government issued order dated 25.9.2004 to constitute a Committee under the Chairmanship of the Advisor to the Hon'ble Minister for Public Works & Energy Department comprising of members drawn from different Departments of Government of Karnataka.

The first meeting of this Committee was held on 5.10.2004 and a decision was taken to improve the following three roads with the private sector participation.

i) Airport road from Kundanahalli cross to Saibaba Ashrama (8.27 kms).
ii) Bannerghatta road from outer ring road to Meenakshi Temple (4 kms).
iii) Sarjapur road from outer ring road to railway level crossing (4.2 kms).

The Committee further suggested that in order to have a stringent quality control check as well as transparency in execution, recommended for formation of a quality control and monitoring wing with the following officials as read (1)

| | | | |
|---|---|---|---|
| i) | Prof. Justo | - | Professor Emeritus, Bangalore University |
| ii) | Sri R.K. Misra | - | Co-ordinator, Public Private Partnership Initiation |
| iii) | Sri M. Nagaraj | - | Executive Engineer, Quality Control Division, P.W.D. Bangalore. |
| iv) | Sri Kini | - | Executive Engineer, Karnataka State Highway Improvement Project Division, Bangalore. |

In the Government order read @ (2) above, it is indicated that these roads must be monitored very strictly on regular basis by the Department as well as Third Party Agencies appointed for the purpose.

The above proposals have been examined in detail and the Government issues the following order.

**Government Order No. PWD/7/EAP/2004, Bangalore, Dated: 12th January 2005**

I. After considering the above facts Government is pleased to order formation of a Quality Control and Monitoring Wing with following person to have a stringent quality control check as well as transparency in execution.

| | | | |
|---|---|---|---|
| i) | Prof. Justo | - | Professor Emeritus, Bangalore University |
| ii) | Sri R.K. Misra | - | Co-ordinator, Public Private Partnership Initiation |
| iii) | Sri M. Nagaraj | - | Executive Engineer, Quality Control Division, P.W.D. Bangalore. |
| iv) | Sri Kini | - | Executive Engineer, Karnataka State Highway Improvement Project Division, Bangalore. |

II. This Quality Control and Monitoring Wing should submit its report to the Secretary, Public Works Department, once in a week without fail.

III. The progress of work as well as the quality control report shall be reviewed by Chief Engineer, Communication & Buildings (South) Bangalore once in a week and the Secretary, Public Works Department shall review the same once in a fortnight.

By Order and in the name of the Governor of Karnataka,

P.R. 118

**B.A. VIJAYA**

Under Secretary to Government, Public Works Department (EAP).

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ:** ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಗೆ 2004-05ನೇ ಸಾಲಿಗೆ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸನೀಇ 01 ಜಸಂಯೋ 2002, ದಿನಾಂಕ: 15.7.2004.
2. ಕಾರ್ಯನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನಾ ಸಂಘ, ಬೆಂಗಳೂರು ಇವರ ದಿನಾಂಕ 22.11.2004ರ ಪತ್ರ ಸಂಖ್ಯೆ:ಜಸಂಇ/ಜಸಂಯೋ/ಏಸಿಟಿ/68/2004-05.

**ಪ್ರಸ್ತಾವನೆ:**

ಜಲ ಸಂವರ್ಧನೆ ಯೋಜನೆಯು ಕಾರ್ಯಗತಗೊಳಿಸುತ್ತಿರುವ ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಯ ಕಾರ್ಯಕ್ರಮಗಳಿಗೆ 2004-05ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702-00-101-2-80-139 (ಯೋಜನೆ) ಅಡಿ 9652.53 ಲಕ್ಷ ರೂ.ಗಳ ಅನುದಾನ ಒದಗಿಸಲಾಗಿದೆ. ಈ ಅನುದಾನದಲ್ಲಿ ಅರ್ಧ ವಾರ್ಷಿಕ ವೆಚ್ಚಕ್ಕಾಗಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2800.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ. ಕಾರ್ಯನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನಾ ಸಂಘ ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಈ ಯೋಜನೆಯ ಯೋಜನಾ ಕರಾರು ಪತ್ರಕ್ಕೆ ದಿನಾಂಕ:4.6.2002 ರಂದು ಸಹಿ ಹಾಕಿದ ನಂತರ ದಿನಾಂಕ: 8.7.2002 ರಿಂದ ಯೋಜನೆಯು ಪ್ರಾರಂಭವಾಗಿ ಹಾಲಿ ಇರುವ 25 ಸಮೂಹ ಮಾರ್ಗದರ್ಶನ ತಂಡಗಳೊಂದಿಗೆ ಹೊಸದಾಗಿ 32 ಸಮೂಹ ಮಾರ್ಗದರ್ಶನ ತಂಡಗಳನ್ನು ನೇಮಿಸಿಕೊಳ್ಳಲಾಗಿದೆ. ಅದರ ಜೊತೆಗೆ ರಾಜ್ಯ ಯೋಜನಾ ಘಟಕ ಮತ್ತು ಜಿಲ್ಲಾ ಯೋಜನಾ ಘಟಕಗಳಲ್ಲಿ ಅವಶ್ಯವಿರುವ ತಾಂತ್ರಿಕ ಮತ್ತು ಇತರ ಸಿಬ್ಬಂದಿ ವರ್ಗದವರು ನೇಮಕಗೊಂಡಿದ್ದು, ಕೆರೆ ಪುನಶ್ಚೇತನ ಕಾರ್ಯಕ್ರಮಗಳನ್ನು ತ್ವರಿತಗೊಳಿಸಲಾಗುತ್ತಿದೆ. 2004-05ನೇ ಸಾಲಿನಲ್ಲಿ ಸುಮಾರು 650 ಕೆರೆಗಳನ್ನು ಪುನಶ್ಚೇತನಗೊಳಿಸುವ ಕಾರ್ಯಕ್ರಮವನ್ನು ಹಮ್ಮಿಕ್ರೊಳ್ಳಲಾಗಿದೆ. ಅವುಗಳ ಪೈಕಿ 167 ಕೆರೆಗಳು ಯೋಜನಾ ಪೂರ್ವ ಹಂತದಲ್ಲಿ 268 ಕೆರೆಗಳು ಯೋಜನಾ ಹಂತದಲ್ಲಿ ಮತ್ತು 215 ಕೆರೆಗಳು ಅನುಷ್ಠಾನ ಹಂತದಲ್ಲಿದೆ. ಈಗಾಗಲೇ ಅರ್ಧ ವಾರ್ಷಿಕ ವೆಚ್ಚಕ್ಕಾಗಿ ಬಿಡುಗಡೆಯಾಗಿರುವ 2800.00 ಲಕ್ಷ ರೂ.ಗಳಲ್ಲಿ ಶೇ.80 ರಷ್ಟು ವೆಚ್ಚ ಉಳಿದ ಹಣವನ್ನು ನವೆಂಬರ್ ಅಂತ್ಯದೊಳಗೆ ಜಿಲ್ಲಾ ಯೋಜನಾ ಘಟಕಗಳ ಕೆರೆ ಅಭಿವೃದ್ಧಿ ಸಂಘಗಳ ಮತ್ತು ಸಮೂಹ ಮಾರ್ಗದರ್ಶನ ತಂಡಗಳ ವೆಚ್ಚದ ತಃಖ್ತೆ ಹಾಗೂ ಸಿಬ್ಬಂದಿಯ ವೇತನವನ್ನು ಭರಿಸಲು ಅಂದಾಜಿಸಲಾಗಿದೆಯೆಂದು ತಿಳಿಸಿ ಯೊಜನೆಯು ಅಸ್ಥಿತ್ವಕ್ಕೆ ಬಂದಾಗಿನಿಂದ ಆಗಿರುವ ವಾರ್ಷಿಕವಾರು ವೆಚ್ಚದ ವಿವರಗಳನ್ನು ಸಲ್ಲಿಸಿದ್ದಾರೆ. 2004-05ನೇ ಸಾಲಿನ ದ್ವಿತೀಯ ಅರ್ಧ ವಾರ್ಷಿಕಕ್ಕೆ ಹಮ್ಮಿಕ್ರೊಂಡಿರುವ ಕಾರ್ಯಚಟುವಟಿಕೆಗಳ ವಿವರ ಈ ಕೆಳಕಂಡಂತಿದೆ:

| ಕ್ರ. ಸಂ. | ಉದ್ದೇಶಿತ ಕಾರ್ಯಕ್ರಮದ ವಿವರ | ಬೇಕಾಗಿರುವ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | ಟ್ಯಾಂಕ್ ಪದ್ಧತಿ ಉಪಯೋಜನೆ | 4600.00 |
| 2. | ಸರಕು ಮತ್ತು ಸಾಮಗ್ರಿಗಳು | 45.00 |
| 3. | ಸಲಹೆಗಾರರ ಸಂಭಾವನೆ | 472.53 |
| 4. | ಸರ್ಕಾರೇತರ ಸಂಸ್ಥೆಗಳು, ಶಿಕ್ಷಣ ಹಾಗೂ ಸಂಶೋಧನಾ ವೆಚ್ಚಗಳು | 700.00 |
| 5. | ತರಬೇತಿ ಮತ್ತು ಕಾರ್ಯಾಗಾರ | 360.00 |
| 6. | ವೇತನಗಳು ಕಾರ್ಯಾಚರಣೆ ಹಾಗೂ ನಿರ್ವಹಣೆ | 675.00 |
| | **ಒಟ್ಟು** | **6852.53** |

2004-05ನೇ ಸಾಲಿಗೆ ದ್ವಿತೀಯ ಕಂತಿನಲ್ಲಿ ಉಳಿದಿರುವ 6852.53 ಲಕ್ಷ ರೂ.ಗಳನ್ನು ಒಂದೇ ಕಂತಿನಲ್ಲಿ ಬಿಡುಗಡೆ ಮಾಡಲು ಕೋರಿದ್ದಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 01 ಜಸಂಯೋ 2002, ಬೆಂಗಳೂರು, ದಿನಾಂಕ: 12ನೇ ಜನವರಿ 2005**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಜಲ ಸಂವರ್ಧನೆ ಯೋಜನಾ ಸಂಘವು ಕರ್ನಾಟಕ ಸಮುದಾಯ ಆಧಾರಿತ ಕೆರೆಗಳ ನಿರ್ವಹಣೆ ಯೋಜನೆಯ ಉದ್ದೇಶಿತ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುವ ಸಲುವಾಗಿ 2004-05ನೇ ಸಾಲಿಗೆ ಲೆಕ್ಕ ಶೀರ್ಷಿಕೆ 4702-00-101-2-80-139(ಯೋಜನೆ) ಅಡಿ ಒದಗಿಸಿರುವ ಅನುದಾನದಲ್ಲಿ ದ್ವಿತೀಯ ಅರ್ಧ ವಾರ್ಷಿಕ ವೆಚ್ಚಕ್ಕಾಗಿ 3000.00 ಲಕ್ಷ ರೂ. (ಮೂರು ಸಾವಿರ ಲಕ್ಷ ರೂ.ಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿದೆ.

ಕಾರ್ಯನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನಾ ಸಂಘ, ಬೆಂಗಳೂರುರವರು ಹಣ ಸಂದಾಯ ಸ್ವೀಕೃತಿಯ ಮೇಲೆ ವಿಶೇಷ ಕರ್ತವ್ಯಾಧಿಕಾರಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ರವರಿಂದ ಮೇಲು ರುಜು ಮಾಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 30.12.2004ರ ಟಿಪ್ಪಣಿ ಸಂಖ್ಯೆ: ಲೋಇ 1233 ಆಕೋ-1/2004ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 119

**ಎಂ.ಎನ್. ಮಂಜುನಾಥ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರ, ಬೆಂಗಳೂರು ಇದರ ಆಡಳಿತ ಮಂಡಳಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆಕುಕ 41 ಪಿಟಿಡಿ 2000, ದಿನಾಂಕ: 26.2.2000.

2. ಸರ್ಕಾರದ ಆದೇಶ ಸಂಖ್ಯೆ: ಆಕುಕ 248 ಪಿಟಿಡಿ 2001, ದಿನಾಂಕ: 27.10.2001.

**ಪ್ರಸ್ತಾವನೆ:**

ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರ, ಬೆಂಗಳೂರು ಇದರ ಆಡಳಿತ ಮಂಡಳಿ ಸಮಿತಿಯನ್ನು ಪುನರ್ ರಚಿಸಲು ಸರ್ಕಾರವು ತೀರ್ಮಾನಿಸಿದೆ. ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರದ ಬೈಲಾ 4ರ ಅನುಸಾರ ಆಡಳಿತ ಮಂಡಳಿಯನ್ನು ರಚಿಸಬೇಕಾಗಿದೆ. ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳು ಈ ಆಡಳಿತ ಮಂಡಳಿಯ ಅಧ್ಯಕ್ಷರಾಗಿರುತ್ತಾರೆ. ಮುಖ್ಯಮಂತ್ರಿಗಳು ಮತ್ತು ಆಡಳಿತ ಮಂಡಳಿಯ ಅಧ್ಯಕ್ಷರ ಕಾರ್ಯ ಒತ್ತಡದಿಂದ ವೈದ್ಯಕೀಯ ಶಿಕ್ಷಣ ಸಚಿವರನ್ನು ಅವರ ಪರವಾಗಿ ಆಡಳಿತ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಬಹುದೆಂದು ಸರ್ಕಾರ ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 80 ಪಿಟಿಡಿ 2004, ಬೆಂಗಳೂರು, ದಿನಾಂಕ: 13ನೇ ಜನವರಿ 2005**

ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರದ ಆಡಳಿತ ಮಂಡಳಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

| | | | |
|---|---|---|---|
| 1. | ವೈದ್ಯಕೀಯ ಶಿಕ್ಷಣ ಸಚಿವರು | - | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಯೋಜನಾ ಇಲಾಖೆ. | - | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | - | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. | - | ಸದಸ್ಯರು |
| 5. | ಸರ್ಕಾರದ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ). | - | ಸದಸ್ಯರು |
| 6. | ಶ್ರೀ ಎನ್.ವೈ. ಗೋಪಾಲ ಕೃಷ್ಣ, ವಿಧಾನಸಭಾ ಸದಸ್ಯರು, ಮೊಣಕಾಲ್ಮೂರು ಕ್ಷೇತ್ರ. | - | ಸದಸ್ಯರು |
| 7. | ಶ್ರೀ ಅನ್ನದಾನಿ ಕೆ. ವಿಧಾನಸಭಾ ಸದಸ್ಯರು, ಮಳವಳ್ಳಿ ಕ್ಷೇತ್ರ | - | ಸದಸ್ಯರು |
| 8. | ಉಪಕುಲಪತಿ, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು. | - | ಸದಸ್ಯರು |
| 9. | ಶ್ರೀ ವಿ.ಎಸ್. ಕೃಷ್ಣಯ್ಯರ್, ಮಾಜಿ ಲೋಕಸಭಾ ಸದಸ್ಯರು, ನಂ.1, ಶಂಕರ್‌ಪಾರ್ಕ್, ಶಂಕರಪುರಂ, ಬೆಂಗಳೂರು - 560 008. | - | ಸದಸ್ಯರು |
| 10. | ಡಾ: ರಾಮೇಗೌಡ, ಮಾಜಿ ಅಧ್ಯಕ್ಷರು, ಎ.ಐ.ಸಿ.ಟಿ.ಇ. ನಂ. 55, 29ನೇ ಮೇನ್, 1ನೇ ಕ್ರಾಸ್, 1ನೇ ಹಂತ, ಬಿ.ಟಿ.ಎಂ.-ಲೇಔಟ್, ಬೆಂಗಳೂರು-560 068. | - | ಸದಸ್ಯರು |
| 11. | ಶ್ರೀ ಎ.ಸಿ. ಷಡಾಕ್ಷರಿ, ಕೇರ್ ಆಫ್ ಶ್ರೀಮತಿ ವಿಶಾಲಾಕ್ಷಮ್ಮ ಜಯದೇವ ಟ್ರಸ್ಟ್, ಸರ್ವೆಯರ್ ಸ್ಟ್ರೀಟ್, ನಂ. 77, ಬಸವನಗುಡಿ, ಬೆಂಗಳೂರು. | - | ಸದಸ್ಯರು |
| 12. | ಪ್ರೊಫೆಸರ್, ಸಿ.ಬಿ. ಕೃಷ್ಣಸ್ವಾಮಿ, ಅರ್ಥಶಾಸ್ತ್ರ ವಿಭಾಗ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು. | - | ಸದಸ್ಯರು |

| | | | |
|---|---|---|---|
| 13. | ಡಾ: ಡಿ. ಚಿನ್ನಯ್ಯ, ನಿವೃತ್ತ ಪ್ರೊಫೆಸರ್ ಹಾಗೂ ಕಾರ್ಡಿಯಾಲಜಿ ವಿಭಾಗದ ಮುಖ್ಯಸ್ಥರು, ಶ್ರೀ ಜಯದೇವ ಹೃದ್ರೋಗ ಸಂಸ್ಥೆ, ನಂ. 61:ಎ, 3ನೇ ಮೈನ್, 8ನೇ ಬ್ಲಾಕ್, ಜಯನಗರ, ಬೆಂಗಳೂರು. | - | ಸದಸ್ಯರು |
| 14. | ಡಾ: ಎಂ.ಎಸ್. ವಲ್ಲಿಥನ್, ಮಾಜಿ ಪ್ರೊಫೆಸರ್ ಹಾಗೂ ಕಾರ್ಡಿಯಾಲಜಿ ವಿಭಾಗದ ಮುಖ್ಯಸ್ಥರು, ಹಾನರರಿ ಅಡ್ವೈಸರ್, ಮಣಿಪಾಲ್ ಅಕಾಡೆಮಿ ಆಫ್ ಎಜುಕೇಷನ್, ಮಾಧವನಗರ, ಮಣಿಪಾಲ - 576119. | - | ಸದಸ್ಯರು |
| 15. | ಡಾ: ಮುರಳೀಧರ್‌ರಾವ್, ಮಾತೃಛಾಯಾ ಆಸ್ಪತ್ರೆ, ಕುಬಾ ಪ್ಲಾಟ್, ಎಸ್.ಬಿ. ಪಾಟೀಲ್ ಪೆಟ್ರೋಲ್ ಬಂಕ್ ಹತ್ತಿರ, ಸ್ಟೇಷನ್ ರೋಡ್, ಗುಲ್ಬರ್ಗಾ. | - | ಸದಸ್ಯರು |
| 16. | ನಿರ್ದೇಶಕರು, ಶ್ರೀ ಜಯದೇವ ಹೃದ್ರೋಗ ಸಂಸ್ಥೆ, ಬೆಂಗಳೂರು. | - | ಸದಸ್ಯಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 120

**ಚೋಮಾನಾಯಕ್ .ಜಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಸಿಆಸುಇ 21 ಆಸೇಇ 2005, ಬೆಂಗಳೂರು, ದಿನಾಂಕ: 12ನೇ ಜನವರಿ 2005**

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 275 ಆಸೇಇ 2004, ದಿನಾಂಕ: 18.11.2004ರ ಆದೇಶದ ಭಾಗದಲ್ಲಿ "ಪ್ರಥಮ ಸ್ಥಗಿತ ವೇತನ ಬಡ್ತಿ" ಎಂದಿರುವುದನ್ನು "ನಾಲ್ಕನೆ ಸ್ಥಗಿತ ವೇತನ ಬಡ್ತಿ" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 121

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:–** ಶ್ರೀ ಗೋನಾಳ್ ಭೀಮಪ್ಪ, ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ಹುದ್ದೆಗೆ ಹೆಚ್ಚಿನ ಪ್ರಭಾರದಲ್ಲಿರಿಸುವ ಬಗ್ಗೆ.

**ಓದಲಾಗಿದೆ:–** ಅಧಿಸೂಚನೆ ಸಂ.ಸಿಆಸುಇ 452 ಆಸೇಇ 2004 ದಿ:29–12–2004.

**ಪ್ರಸ್ತಾವನೆ:–**

ಮೇಲೆ ಓದಲಾದ ಅಧಿಸೂಚನೆಯಲ್ಲಿ ಶ್ರೀ ಆರ್.ಕೆ.ರಾಜು ಕೆ.ಎ.ಎಸ್,(ಸೂಪರ್ ಟೈಂ ಸ್ಕೇಲ್) ಅಧಿಕಾರಿ ಇವರು ವ್ಯವಸ್ಥಾಪಕರ ನಿರ್ದೇಶಕರು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಲ್ಲಿ ಕರ್ತವ್ಯದಲ್ಲಿದ್ದು, ಇವರ ವೈಯಕ್ತಿಕ ಕಾರಣದ ಮೇಲೆ ದಿ:1–1–2005 ರಿಂದ 31–1–2005ರವರೆಗೆ ಗಳಿಕೆ ರಜೆ ಮಂಜೂರು ಮಾಡಿದೆ. ಈ ಅವಧಿಯಲ್ಲಿ ಶ್ರೀ ಗೋನಾಳ್ ಭೀಮಪ್ಪ ನಿರ್ದೇಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವ್ಯವಸ್ಥಾಪಕರ ಹುದ್ದೆಗೆ ಹೆಚ್ಚಿನ ಪ್ರಭಾರದಲ್ಲಿರಿಸಲು ತೀರ್ಮಾನಿಸಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಮಮಇ 822 ಎಸ್‌ಜೆಡಿ 2004 ಬೆಂಗಳೂರು ದಿನಾಂಕ: 31ನೇ ಡಿಸೆಂಬರ್ 2004**

ಮೇಲೆ ವಿವರಿಸಿದ ಕಾರಣದಿಂದಾಗಿ ಶ್ರೀ ಆರ್.ಕೆ.ರಾಜು, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಜಯನಗರ ಬೆಂಗಳೂರು, ಇವರು ದಿ:1–1–2005 ರಿಂದ 31–1–2005 ರವರೆಗೆ ಗಳಿಕೆ ರಜೆ ಮೇಲೆ ತೆರಳಿರುವುದರಿಂದ ಈ ಅವಧಿಯಲ್ಲಿ ಶ್ರೀ ಗೋನಾಳ್ ಭೀಮಪ್ಪ, ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವ್ಯವಸ್ಥಾಪಕರ ಹುದ್ದೆಗೆ ಹೆಚ್ಚಿನ ಪ್ರಭಾರದಲ್ಲಿರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 122

**ಪ್ರ.ದ.ಸಿದ್ಧಾಂತಿ**

ಸರ್ಕಾರದ ಅಧೀನ ಕಾರ್ಯದರ್ಶಿ–2,(ಪ್ರಭಾರ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:–** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ 76 ಪರಿವೀಕ್ಷಣಾಧಿಕಾರಿ ದರ್ಜೆ–1ರ ವೃಂದದ ಅಧಿಕಾರಿಗಳಿಗೆ ಸ್ವಯಂಚಾಲಿತ ವೇತನ ಬಡ್ತಿ ಮಂಜೂರಾತಿ ಬಗ್ಗೆ.

**ಓದಲಾಗಿದೆ:–** 1. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂ.ಮಮಇ:ನಿಸಿಗೆ:103:2001–2002 ದಿ:30–3–2002.

**ಪ್ರಸ್ತಾವನೆ:–**

ಮೇಲೆ ಓದಲಾದ ಉಲ್ಲೇಖಿತ ಪತ್ರಗಳಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರು ಪರಿವೀಕ್ಷಣಾಧಿಕಾರಿ ದರ್ಜೆ–1ರ ವೃಂದದ ಅಧಿಕಾರಿಗಳಿಗೆ ಸ್ವಯಂಚಾಲಿತ ವೇತನ ಬಡ್ತಿ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿದ್ದು, ಸದರಿ ಅಧಿಕಾರಿಗಳಿಗೆ ಸ್ವಯಂ ಚಾಲಿತ ವೇತನ ಬಡ್ತಿಗೆ ಪರಿಗಣಿಸಲು ಈ ಕೆಳಕಂಡ ಅಂಶಗಳನ್ನು ಪರಿಶೀಲಿಸಲಾಗಿದೆ:–

1] ಬಡ್ತಿ ಸಮಯದಲ್ಲಿ ಪರಿಗಣಿಸುವಂತೆಯೇ ತೃಪ್ತಿಕರ ಸೇವೆ ಸಲ್ಲಿಸಿರಬೇಕು.

2] ಇಲಾಖಾ ವಿಚಾರಣೆ ಇರಬಾರದು ಮುಂದಿನ ಬಡ್ತಿ ಹಂತದಲ್ಲಿ ಬಡ್ತಿ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

3] ಒಂದೇ ಹುದ್ದೆಯಲ್ಲಿ ಸತತವಾಗಿ 15 ವರ್ಷಗಳ ಕಾಲ ಸೇವೆ ಸಲ್ಲಿಸಿರಬೇಕು.

ಸರ್ಕಾರವು ಮೇಲಿನ ಅಂಶಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ.ಮಮಇ 97 ಎಸ್‌ಜೆಡಿ 2002 ಬೆಂಗಳೂರು ದಿನಾಂಕ: 12ನೇ ಜನವರಿ 2005**

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿನ ಅನುಬಂಧದಲ್ಲಿ ನಮೂದಿಸಿರುವ 3 ಪರಿವೀಕ್ಷಣಾಧಿಕಾರಿ ದರ್ಜೆ–1ರ ವೃಂದದ ಅಧಿಕಾರಿಗಳು ಅನುಬಂಧದಲ್ಲಿನ ಕಲಂ 4 ಮತ್ತು ಕಲಂ 5 ರಲ್ಲಿ ನಮೂದಿಸಿರುವ ದಿನಾಂಕದವರೆಗೆ ಸೇವೆ ಸಲ್ಲಿಸಿ ಸ್ವಯಂಚಾಲಿತ ವೇತನ ಬಡ್ತಿಗೆ ಅರ್ಹತೆ ಹೊಂದಿರುತ್ತಾರೆ ಹಾಗೂ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ

ಸ್ವಯಂಚಾಲಿತ ವಿಶೇಷ ಮುಂಬಡ್ತಿ) ನಿಯಮಗಳು 1991 ರ ಆದೇಶದಲ್ಲಿ ಸೂಚಿಸಿರುವ ಷರತ್ತುಗಳನ್ನು ಪೂರೈಸಿರುತ್ತಾರೆ. ಆದುದರಿಂದ ಸದರಿ ಅಧಿಕಾರಿಗಳಿಗೆ ಅವರ ಹೆಸರಿನ ಮುಂದೆ ಕಲಂ 6 ರಲ್ಲಿ ಸೂಚಿಸಿರುವ ದಿನಾಂಕದಂದು ಅನ್ವಯವಾಗುವಂತೆ ಸ್ವಯಂಚಾಲಿತ ವೇತನ ಬಡ್ತಿ ನೀಡಿ ಅವರ ಹುದ್ದೆಗಳಿಗೆ ಅನ್ವಯವಾಗುವ ಆಯ್ಕೆ ಕಾಲಿಕ ವೇತನ ಶ್ರೇಣಿಯಲ್ಲಿ ಮುಂದುವರೆಯಲು ಸರ್ಕಾರವು ಮಂಜೂರಾತಿ ನೀಡಿದೆ.

| ಕ್ರ. ಸಂ. | ಅಧಿಕಾರಿ ಹೆಸರು ಶ್ರೀಯುತ/ಶ್ರೀಮತಿ | ಜೇಷ್ಠತಾ ಕ್ರ.ಸಂ. | ಮಹಾಲೇಖಪಾಲರ ದಾಖಲೆಯಂತೆ ಕರ್ತವ್ಯಕ್ಕೆ ಹಾಜರಾದದಿನಾಂಕ | 15 ವರ್ಷಗಳ ಪೂರ್ಣಗೊಂಡ ದಿನಾಂಕ | ಸ್ವಯಂ ಚಾಲಿತ ವೇತನ ಬಡ್ತಿ |
|---|---|---|---|---|---|
| 1. | ದುರ್ಗಾಂಬ | 121 | 05–11–1984 | 04–11–1999 | 05–11–1999 |
| 2. | ಕೆ.ಜಿ.ಶಿವಮೂರ್ತಿ | 145 | 18–10–1984 | 17–10–1999 | 18–10–1999 |
| 3. | ರತ್ನ.ಬಿ.ಕಲಮದಾನಿ | 161 | 07–03–1983 | 06–03–1998 | 07–03–1998 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 123

**ಪ್ರ.ದ.ಸಿದ್ಧಾಂತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

### ಸೇರ್ಪಡೆ ಸಂಖ್ಯೆ: ಲೋಇ 81 ಸೇಸಎ 2004, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2004

ಭಾರತದ ಸಂವಿಧಾನದ 85ನೇ ತಿದ್ದುಪಡಿಯನ್ನು ಜಾರಿಗೊಳಿಸಿದ್ದರ ಪರಿಣಾಮವಾಗಿ ಕರ್ನಾಟಕ ಸರ್ಕಾರವು ದಿನಾಂಕ: 27.4.1978 ರಿಂದ ಜಾರಿಗೆ ಬರುವಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಧಿಕಾರಿ:ನೌಕರರಿಗೂ ಪದೋನ್ನತಿಯೊಂದಿಗೆ ಜೇಷ್ಠತೆಯನ್ನು ನೀಡಬೇಕೆಂದು ಅವಕಾಶ ಕಲ್ಪಿಸಿ ಎರಡು ಸುಗ್ರೀವಾಜ್ಞೆಗಳನ್ನು ಜಾರಿಗೆ ತಂದ ಪರಿಣಾಮವಾಗಿ ಬಡಪ್ಪನವರ್‌ರವರ ಪ್ರಕರಣದ ಪ್ರಕಾರ ತಯಾರಿಸಿ ಹೊರಡಿಸಿದ್ದ ಲೋಕೋಪಯೋಗಿ ಮತ್ತು ಜಲ ಸಂಪನ್ಮೂಲ ಇಲಾಖೆಗೆ ಸೇರಿದ ಇಂಜಿನಿಯರುಗಳ ಜೇಷ್ಠತಾ ಪಟ್ಟಿಗಳನ್ನು ಪರಿಷ್ಕರಿಸುವ ಅಗತ್ಯತೆ ಉಂಟಾಗಿದ್ದರಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 11.4.2002ರ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 132 ಎಸ್‌ಎಜಿ 2002ರಲ್ಲಿ ಪ್ರಕಟಿಸಲಾಗಿದೆ.

ದಿನಾಂಕ: 11.4.2002ರ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಎಂ.ಹೆಚ್. ಭೀಮಕ್ಕನವರ ಜೇಷ್ಠತೆ ಕ್ರಮ ಸಂಖ್ಯೆ: 2434ರಲ್ಲಿ ಪತಿಬಿಂಬಿತರಾಗಿದ್ದು, ಈ ಜೇಷ್ಠತೆಯನ್ನು ಗೊತ್ತುಪಡಿಸಿರುವ ಬಗ್ಗೆ ಶ್ರೀ ಎಂ.ಹೆಚ್. ಭೀಮಕ್ಕನವರ್‌ರವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 8574:2003ನ್ನು ಸಲ್ಲಿಸಿ ಅಧಿಸೂಚನೆ ಸಂಖ್ಯೆ: ಲೋಇ 209 ಸೇಸಎ 96 ದಿನಾಂಕ: 3.12.1997 ಮತ್ತು ಅಧಿಸೂಚನೆ ಸಂಖ್ಯೆ: ಲೋಇ 240 ಸೇಸಎ 2001 ದಿನಾಂಕ: 20.8.2001ರಲ್ಲಿ ಪ್ರಕಟಿಸಲಾಗಿದ್ದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ಜೇಷ್ಠತಾ ಪಟ್ಟಿಗಳನ್ನು ಆಧರಿಸಿ, ತಮ್ಮ ಜೇಷ್ಠತೆಯನ್ನು ಪುನರ್ ನಿಗದಿಪಡಿಸಬೇಕೆಂದು ಕೋರಿದ್ದರು. ದಿನಾಂಕ:13.11.2003ರಂದು ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಸದರಿ ಅರ್ಜಿಯನ್ನು ಪುರಸ್ಕರಿಸಿ, ಶ್ರೀ ಎಂ.ಹೆಚ್. ಭೀಮಕ್ಕನವರ್‌ರವರ ಮನವಿಯ ಮೇಲೆ ಕಾನೂನು ರೀತ್ಯಾ ಕ್ರಮವಹಿಸಬೇಕೆಂದು ತೀರ್ಪು ನೀಡಿದೆ.

ಶ್ರೀ ಎಂ.ಹೆಚ್. ಭೀಮಕ್ಕನವರ್‌ರವರು ಮೇಲ್ಕಂಡ ತೀರ್ಪಿನ ಪ್ರತಿಯನ್ನು ನೀಡುತ್ತಾ ದಿನಾಂಕ: 7.5.2004ರಂದು ಮನವಿ ಸಲ್ಲಿಸಿ, ತಮ್ಮ ಜೇಷ್ಠತೆಯನ್ನು ಅಧಿಸೂಚನೆ ಸಂಖ್ಯೆ: ಲೋಇ 132 ಸೇಸಎ 2002ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 1813ಎ ಯನ್ನಾಗಿ ಮಾರ್ಪಡಿಸಿ ಪುನರ್ ನಿಗದಿಪಡಿಸುವಂತೆ ಕೋರಿರುತ್ತಾರೆ.

ಈ ಸೇರ್ಪಡೆ ಮಾಡಿದಲ್ಲಿ ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಜೇಷ್ಠತೆಯನ್ನು ಕಾಪಾಡಿಕೊಂಡಿರುವ ವ್ಯಕ್ತಿಗಳಿಗೆ ಯಾವುದೇ ಬಾಧಕ ಆಗುವುದಿಲ್ಲ ಮತ್ತು ಸರ್ವೋಚ್ಚ ನ್ಯಾಯಾಲಯದ ಮಧ್ಯಂತರ ಆದೇಶದ ಉಲ್ಲಂಘನೆ ಆಗುವುದಿಲ್ಲ ಎಂಬುದನ್ನು ಪರಿಗಣಿಸಿ ಶ್ರೀ ಎಂ.ಹೆಚ್. ಭೀಮಕ್ಕನವರ್‌ರವರು ಸಲ್ಲಿಸಿರುವ ಅರ್ಜಿ ಹಾಗೂ ಕೆ.ಎ.ಟಿ. ಆದೇಶದಂತೆ ಈ ಕ್ರಮವನ್ನು ಯಾವುದೇ ಪೂರ್ವ ನಿದರ್ಶನವಾಗಿ ಇಟ್ಟುಕೊಳ್ಳಬಾರದೆಂಬ ಷರತ್ತಿಗೆ ಒಳಪಟ್ಟು ಒಂದು ವಿಶೇಷ ಸಂದರ್ಭವನ್ನಾಗಿ ಪರಿಗಣಿಸಿ ಮತ್ತು ಸರ್ವೋಚ್ಚ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 132 ಸೇಸಎ 2002 ದಿನಾಂಕ: 11.4.2002ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 2434ಕ್ಕೆ ಬದಲಾಗಿ ಕ್ರಮ ಸಂಖ್ಯೆ: 1813ಎ ನ್ನಾಗಿ ಸರ್ಕಾರದ ಸೇರ್ಪಡೆ ಆದೇಶ ಸಂ. ಲೋಇ 81 ಸೇಸಎ 2004 ದಿನಾಂಕ: 26.11.2004ರಲ್ಲಿ ಸೇರ್ಪಡಿಸಲಾಗಿದ್ದು, ಈ ಸೇರ್ಪಡೆಯಿಂದ ಬಾಧಿತರಾಗುವ ಯಾವುದೇ ಅಧಿಕಾರಿಯು ತಮ್ಮ ಆಕ್ಷೇಪಣೆ ಸಲಹೆಗಳಿದ್ದಲ್ಲಿ ಅದನ್ನು ಸಮರ್ಥಿಸುವಂತಹ ದೃಢೀಕೃತ ದಾಖಲಾತಿಯೊಂದಿಗೆ ಈ ತಿದ್ದುಪಡಿ ದಿನಾಂಕದಿಂದ 15 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ ಬಹುಮಹಡಿಗಳ ಕಟ್ಟಡ, 5ನೇ ಮಹಡಿ, ಬೆಂಗಳೂರು ಇವರಿಗೆ ಸಲ್ಲಿಸುವಂತೆ ಕೋರಲಾಗಿತ್ತು.

ಈ ಸೇರ್ಪಡೆಗೆ ಸಂಬಂಧಿಸಿದಂತೆ ನಿಗದಿತ ಸಮಯದೊಳಗೆ ಯಾವುದೇ ಆಕ್ಷೇಪಣೆ ಸಲಹೆಗಳನ್ನು ಸ್ವೀಕರಿಸಿರುವುದಿಲ್ಲ, ಆದ್ದರಿಂದ, ದಿನಾಂಕ: 11.4.2002 ರಂದು ಹೊರಡಿಸಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಈ ಕೆಳಕಂಡಂತೆ ಸೇರ್ಪಡೆ ಮಾಡಿ ಅಂತಿಮಗೊಳಿಸಲಾಗಿದೆ. ಈ ಸೇರ್ಪಡೆಯು ಸಂವಿಧಾನ ಪೀಠದ ಮುಂದೆ ಬಾಕಿ ಇರುವ ರಿಟ್ ಅರ್ಜಿಗಳಲ್ಲಿ ನೀಡುವ ತೀರ್ಪಿಗನುಸಾರ ಪರಿಷ್ಕರಣೆಗೆ ಒಳಪಟ್ಟಿರುತ್ತದೆ.

| AEE Grd. No. | List No. | AE Grd. No. | Name of the Engineer | SC/ST | Date of Birth | AEE Promotion Date | AEE Eligibility Date | Remarks |
|---|---|---|---|---|---|---|---|---|
| 1813A | 2 | 4320 | M.H. Bhimakka-navar | ST | 1-3-58 | 30-3-94 | 1-7-95 | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 124

**ಬಿ.ಎಂ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಎ)

## ಕಂದಾಯ ಸಚಿವಾಲಯ

**ವಿಷಯ:** ರಾಜ್ಯದ ವಿವಿಧ ತಾಲ್ಲೂಕು ಕಚೇರಿಗಳಲ್ಲಿ ಕರ್ನಾಟಕ ಭೂಸುಧಾರಣೆ ಕಾಯ್ದೆಯಡಿ ಕಾರ್ಯನಿರ್ವಹಿಸಲು ಮಂಜೂರಾಗಿದ್ದ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಆದೇಶ ಸಂಖ್ಯೆ: ಆರ್‌ಡಿ 17 ಎಲ್‌ಆರ್‌ಇ 1988(ಭಾ-2), ದಿನಾಂಕ: 14.5.93.
2. ಆದೇಶ ಸಂಖ್ಯೆ: ಆರ್‌ಡಿ 68 ಎಲ್‌ಆರ್‌ಎ 2001, ದಿನಾಂಕ: 22.10.2001.
3. ಆದೇಶ ಸಂಖ್ಯೆ: ಆರ್‌ಡಿ 85 ಎಲ್‌ಆರ್‌ಎ 02, ದಿನಾಂಕ: 7.9.02 ಮತ್ತು 7.10.02.
4. ಆದೇಶ ಸಂಖ್ಯೆ: ಆರ್‌ಡಿ 50 ಎಲ್‌ಆರ್‌ಎ 2003, ದಿನಾಂಕ: 16.12.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ವಿವಿಧ ತಾಲ್ಲೂಕು ಕಚೇರಿಗಳಲ್ಲಿ ಕರ್ನಾಟಕ ಭೂಸುಧಾರಣೆ ಕಾಯ್ದೆ ಅಡಿ ಕಾರ್ಯನಿರ್ವಹಿಸಲು 175 ತಾತ್ಕಾಲಿಕ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಸೃಜಿಸಲಾಗಿದ್ದು, ಈ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಲಾಗುತ್ತಿದೆ. ಅಂತಿಮವಾಗಿ ಕಳೆದ ಸಾಲಿನಲ್ಲಿ ಕ್ರ.ಸಂ. (4) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 1.4.2003 ರಿಂದ 31.3.2004 ರವರೆಗೆ - ಒಂದು ವರ್ಷ ಕಾಲಾವಧಿಗೆ ಮುಂದುವರಿಸಲಾಗಿದೆ.

ಪ್ರಸ್ತುತ 2004-2005ನೇ ಸಾಲಿನಲ್ಲಿ ಭೂಸುಧಾರಣೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ 142 ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಮಾತ್ರ ಮುಂದುವರಿಸಲು ಆಯವ್ಯಯದ ಅಪೆಂಡಿಕ್ಸ್-ಬಿ ನಲ್ಲಿ ಅವಕಾಶ ಕಲ್ಪಿಸಲಾಗಿದೆ. ರಾಜ್ಯದ ಕೆಲವೊಂದು ಜಿಲ್ಲಾಧಿಕಾರಿಗಳು ವಿವಿಧ ತಾಲ್ಲೂಕು ಕಚೇರಿಗಳಲ್ಲಿ ಕರ್ನಾಟಕ ಭೂಸುಧಾರಣೆ ಕಾಯ್ದೆ ಅಡಿ ಕಾರ್ಯನಿರ್ವಹಿಸುತ್ತಿರುವ ತಾತ್ಕಾಲಿಕ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳು ಅಗತ್ಯವಾಗಿರುವುದರಿಂದ ಮತ್ತೊಂದು ವರ್ಷ ಮುಂದುವರಿಸುವಂತೆ ಕೋರಿದ್ದು, ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಒಂದು ವರ್ಷ ಅವಧಿಗೆ ಮುಂದುವರಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 131 ಎಲ್‌ಆರ್‌ಎ 2004, ಬೆಂಗಳೂರು, ದಿನಾಂಕ: 15ನೇ ಜನವರಿ 2005**

ರಾಜ್ಯದ ವಿವಿಧ ತಾಲ್ಲೂಕು ಕಚೇರಿಗಳಲ್ಲಿ ಭೂಸುಧಾರಣೆ ಕಾರ್ಯನಿರ್ವಹಿಸಲು ಸೃಜಿಸಲಾಗಿದ್ದ ತಾತ್ಕಾಲಿಕ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳ ಪೈಕಿ 142 ಹುದ್ದೆಗಳನ್ನು (2004-2005ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್-ಬಿ ಯಲ್ಲಿ ವಿವರಿಸಿರುವಂತೆ - ಬೆಂಗಳೂರು ವಿಭಾಗದ ಜಿಲ್ಲೆಗಳಿಗೆ 50 ಹುದ್ದೆಗಳು, ಮೈಸೂರು ವಿಭಾಗದ ಜಿಲ್ಲೆಗಳಿಗೆ 43 ಹುದ್ದೆಗಳು ಹಾಗೂ ಬೆಳಗಾವಿ ವಿಭಾಗದ ಜಿಲ್ಲೆಗಳಿಗೆ 49 ಹುದ್ದೆಗಳು, ಒಟ್ಟು 142 ಹುದ್ದೆಗಳು) ಒಂದು ವರ್ಷದ ಅವಧಿಗೆ ಅಂದರೆ, ದಿನಾಂಕ: 1.4.2004 ರಿಂದ 31.3.2005 ರವರೆಗೆ ಮಾತ್ರ ಮುಂದುವರಿಸಿ ಆದೇಶಿಸಲಾಗಿದೆ.

ಸದರಿ ಬಾಬ್ತಿನ ವೆಚ್ಚವನ್ನು 2004-2005ನೇ ಸಾಲಿನ ಲೆಕ್ಕ ಶೀರ್ಷಿಕೆ “2506-ಲ್ಯಾಂಡ್ ರಿಫಾರಮ್ಸ್-ರೆಗ್ಯುಲೇಶನ್ ಆಫ್ ಲ್ಯಾಂಡ್ ಹೋಲ್ಡಿಂಗ್ ಅಂಡ್ ಟೆನೆನ್ಸಿ” (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಹುದ್ದೆಗಳ ಮುಂದುವರಿಕೆಗೆ ಸಂಬಂಧಿಸಿದಂತೆ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 17 ಎಲ್‌ಆರ್‌ಇ 88 (ಭಾ-2), ದಿನಾಂಕ: 14.5.93 ರಲ್ಲಿ ವಿಧಿಸಿರುವ ಷರತ್ತುಗಳು ಅನ್ವಯವಾಗುತ್ತವೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.7.1996 ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 125

**ಕೆ. ನರಸಿಂಹಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ)

## AGRICULTURE AND HORTICULTURE SECRETARIAT

**Sub:** Reallotment of area in Shimoga and Chickmagalore district to M/s Bhadravathi Balaji Oil Palms Ltd., Bhadravathi for Oil Palm Development

**Read:**
1. G.O.No.AHD 03 HPP 99 dated 31.01.2000.
2. G.O.No.AHD 133 HPP 2000 dated 4.11.2000.
3. Letter of Director of Horticulture No.AD/OPDP/AHO-1/31/2004-05 dated 20.12.2004.

**Preamble:-**

The Development of Oil Palm in Karnataka is taken up by allotting areas to private entrepreneurs for oil palm area expansion and setting up of processing units. Shimoga and Chickmagalore area were allotted to M/s Simhapuri Agritech Company, Indiranagar, Bangalore vide Government Orders read at 1 and 2 above.

The Director of Horticulture has proposed vide letter read at 3 above that M/s Simhapuri Agritech Limited is showing poor performance and in the 20th Project Management Committee meeting it was decided to recommend to the Government to cancel the area allotted to M/s Simhapuri Agritech Limited and to reallot the same areas to the new promoter M/s Bhadravathi Balaji Oil Palms Ltd., Bhadravathi in the interest of Oil Palm Development programme in Shimoga and Chickmagalore districts.

This has been examined and the following orders have been issued.

**Government Order No. AHD 208 HPP 2004, Bangalore, Dated: 13th January 2005**

Government after examining the poor performance by M/s Simhapuri Agritech Company in Oil Palm Development and Processing, here by withdraws with immediate effect the area allotted to M/s Simhapuri Agritech Company in Shimoga , Bhadravathi, Hosanagara, Thirthalli and Shikaripura taluks of Shimoga district and Tarikere and Kadur taluks of Chickmagalore district.

These areas have now been allotted to the new promoter M/s Bhadravathi Balaji Oil Palms Ltd., Bhadravathi with immediate effect for Oil Palm Development and Establishment of Processing Unit.

M/s Bhadravathi Balaji Oil Palms Limited shall abide by the following guidelines and also the guidelines to be issued by the Government from time to time.

**TERMS AND CONDITIONS:**

1) The organization/company shall have their own extension support for area expansion programme, nursery development and distribution of planting materials.
2) The organization/company shall abide and accept the recommendations of Price Fixation Committee for FFB's set-up by the State Government from time to time.
3) The company/organization shall enter into a tripartite agreement involving financial institutions/Banks, farmers and company for recovery of loan by way of deductions from out of the amount payable to farmers for their sale of fresh fruit bunches (FFB).
4) The company/organization will assist the farmers in availing loan from the Commercial Banks/NABARD.
5) The FFB's shall be purchased from the farmers by the company in their areas from the time and date of issue of Government Order, otherwise, they shall compensate for the loss to the farmers.
6) The company/organization shall set up processing units of adequate capacities in the area allotted to them well before the harvest of first year FFB and they should report on this every month to the Director of Horticulture.
7) The company/organization shall be fully responsible for setting up for processing plants with all infrastructural facilities and to obtain required clearance from KEB, Pollution Control Board, other concerned agencies and including import of sprouts.
8) The company/organization shall abide by the provisions of the Acts/Rules in force and to be enforced, if any in future, relating to oil palm development and processing.
9) The company /organization shall within 15 days of the issue of this Government Order give in writing their acceptance of the area allotted agreeing to the conditions stated above for implementation of the oil palm project in Karnataka.
10) The company/organization shall commence operation of oil palm development in their respective area immediately and shall take up a minimum of 5000 Ha. each of oil palm plantations in the next 4 to 5 years.
11) The company shall not withdraw from the scheme for any reason whatsoever.
12) To make this scheme a success, the company shall extend full co-operation and maintain a cordial relationship with the farmers and the Government.
13) The company shall maintain positive relationship with farmers and Government to make the programme a success.
14) The Director of Horticulture shall supervise, monitor and evaluate the performance of the above company on behalf of the Government and take such appropriate actions required to make the scheme a success.

By Order and in the name of the Governor of Karnataka,

**N. MANJULA GEETHA**

Under Secretary to Government,

Agriculture and Horticulture Department.

P.R. 126

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ರಾಧಾಕೃಷ್ಣ ಮದನ್‌ಕರ್ ಕೆ.ಎ.ಎಸ್. ಅಧಿಕಾರಿ, ವಿರುದ್ಧ ಇಲಾಖಾ ವಿಚಾರಣೆ - ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ನೋಟೀಸ್ ಸಂಖ್ಯೆ:ಸಿಆಸುಇ 99 ಎಸ್‌ಇಎನ್ 99 ದಿನಾಂಕ: 3.11.2001.
2. ಶ್ರೀ ರಾಧಾಕೃಷ್ಣ ಮದನ್‌ಕರ್ ಕೆ.ಎ.ಎಸ್. ಅಧಿಕಾರಿಯವರ ಉತ್ತರ ದಿನಾಂಕ: 3.12.2001.
3. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 99 ಎಸ್‌ಇಎನ್ 99 ಬೆಂಗಳೂರು ದಿನಾಂಕ: 28.2.2002.
4. ಜಿಲ್ಲಾಧಿಕಾರಿಗಳು ಹಾಗೂ ವಿಚಾರಣಾಧಿಕಾರಿಗಳು, ಬೆಂಗಳೂರು ರವರ ದಿನಾಂಕ: 30.12.2003ರ ವಿಚಾರಣಾ ವರದಿ.
5. 2ನೇ ಕಾರಣ ಕೇಳಿ ನೋಟೀಸ್ ಸಂಖ್ಯೆ:ಸಿಆಸುಇ 99 ಎಸ್‌ಇಎನ್ 99 ದಿನಾಂಕ: 19.3.2004.
6. ಶ್ರೀ ರಾಧಾಕೃಷ್ಣ ಮದನ್‌ಕರ್ ರವರ ದಿನಾಂಕ: 5.5.2004ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಕಂದಾಯ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಹುಬ್ಬಳ್ಳಿ ಗ್ರಾಮೀಣ ವಿಧಾನಸಭಾ ಮತಕ್ಷೇತ್ರಕ್ಕೆ ಚುನಾವಣಾಧಿಕಾರಿಯೆಂದು ನೇಮಕ ಮಾಡಿದ್ದರೂ ಸಹ ಆ ಬಗೆಗಿನ ಜವಾಬ್ದಾರಿಯನ್ನು ಅರಿಯದೇ ಮೇಲಾಧಿಕಾರಿಗಳಿಂದ ರಜೆ

ಮಂಜೂರು ಪಡೆಯದೇ ರಜೆಯ ಮೇಲೆ ತೆರಳುವ ಮೂಲಕ ಚುನಾವಣಾ ಕೆಲಸಗಳಿಗೆ ಅಡ್ಡಿಯುಂಟುಮಾಡಿದ ಮತ್ತು ಚುನಾವಣಾ ಕೆಲಸ ಕಾರ್ಯಗಳನ್ನು ಸಮರ್ಪಕವಾಗಿ ಮತ್ತು ಜವಾಬ್ದಾರಿಯುತವಾಗಿ ನಿರ್ವಹಿಸದೇ ದುರ್ನಡತೆಯನ್ನು ಎಸಗಿದ ಆರೋಪಗಳಿಗಾಗಿ ಶ್ರೀ ರಾಧಾಕೃಷ್ಣ ಮದನ್‌ಕರ್ ಕೆ.ಎ.ಎಸ್. ಅಧಿಕಾರಿಯವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 3.11.2001 ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಆರೋಪಿತರು ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 3.12.2001ರ ಉತ್ತರ ಸಲ್ಲಿಸಿ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆರೋಪಿತರ ಉತ್ತರವನ್ನು ಪರಿಶೀಲಿಸಲಾಗಿ ಅದು ಮನಗಾಣಿಸುವ ರೀತಿಯಲ್ಲಿಲ್ಲವಾದ್ದರಿಂದ ಆರೋಪಗಳಲ್ಲಿನ ಸತ್ಯಾಂಶವನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿ ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಜಿಲ್ಲಾಧಿಕಾರಿ ಬೆಂಗಳೂರುರವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಯಿತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (4)ರಲ್ಲಿ ಓದಲಾದ ದಿನಾಂಕ: 30.12.2003ರ ವಿಚಾರಣಾ ವರದಿ ಸಲ್ಲಿಸಿ ಆಪಾದಿತ ಅಧಿಕಾರಿಯು ತನ್ನ ರಕ್ಷಣಾ ಹೇಳಿಕೆ ಸಮಜಾಯಿಷಿಯಲ್ಲಿ ಸದರಿ ಚುನಾವಣಾ ಪ್ರಕ್ರಿಯೆಯಲ್ಲಿ ಕೆಲವು ಅಡಚಣೆಗಳು ಆತಂಕಗಳು ಉಂಟಾಗಿತ್ತು. ಎನ್ನುವುದನ್ನು ತಾನೇ ಒಪ್ಪಿಕೊಂಡಿರುತ್ತಾನೆ. ಅಲ್ಲದೆ ಆಪಾದಿತ ಅಧಿಕಾರಿಯು ಅದರಲ್ಲಿಯೂ ಚುನಾವಣಾ ಕಾರ್ಯದಲ್ಲಿ ತನ್ನ ಕರ್ತವ್ಯನಿಷ್ಠೆಯನ್ನು ಬದಿಗೊತ್ತಿ ತನ್ನ ಬೇಜವಾಬ್ದಾರಿ, ನಿರ್ಲಕ್ಷ್ಯತೆಯನ್ನು ಪ್ರತಿಬಿಂಬಿಸಿರುತ್ತಾರೆ. ಆದ್ದರಿಂದ ಸದರಿ ಆಪಾದಿತ ಅದಿಕಾರಿ ವಿರುದ್ಧ ಮಾಡಲಾಗಿರುವ ಆಪಾದನೆಗಳು ಸಾಬೀತಾಗಿರುತ್ತವೆಂದು ವರದಿ ಮಾಡಿರುತ್ತಾರೆ.

ಈ ಬಗ್ಗೆ ಮೇಲೆ (5)ರಲ್ಲಿ ಓದಲಾದ ದಿನಾಂಕ: 19.3.2004ರಲ್ಲಿ 2ನೇ ಕಾರಣ ಕೇಳುವ ನೋಟೀಸ್ ನೀಡುವ ಮೂಲಕ ವಿಚಾರಣಾ ವರದಿಯ ಬಗ್ಗೆ ಅವರ ಹೇಳಿಕೆ ನೀಡುವ ಅವಕಾಶ ನೀಡಲಾಯಿತು. ಶ್ರೀ ರಾಧಾಕೃಷ್ಣ ಮದನ್‌ಕರ್‌ರವರು ಮೇಲೆ (6)ರಲ್ಲಿ ಓದಲಾದ ದಿನಾಂಕ: 5.5.2004ರ ಉತ್ತರದಲ್ಲಿ ತಮ್ಮ ಸೇವಾ ಅವಧಿಯಲ್ಲಿ 10-12 ಚುನಾವಣೆಗಳನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆಂದು ತಮ್ಮ ಮೇಲೆ ಹೊರಿಸಲಾದ ಎಲ್ಲಾ ಆರೋಪಗಳನ್ನು ತಳ್ಳಿಹಾಕಿ ಆರೋಪಮುಕ್ತರನ್ನಾಗಿಸಬೇಕೆಂದು ಕೋರಿದ್ದಾರೆ.

ಮೇಲ್ಕಂಡ ವಿವರಗಳನ್ನು ಪರಿಶೀಲಿಸಿದ ಸರ್ಕಾರವು ಆರೋಪಿತ ಅಧಿಕಾರಿಗಳ ಹೇಳಿಕೆಯಲ್ಲಿ ಯಾವುದೇ ಪರಿಗಣಿಸಬಹುದಾದ ಅಂಶಗಳು ಇಲ್ಲದಿರುವುದನ್ನು ಮನಗಂಡು ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 99 ಎಸ್‌ಇಎನ್ 99, ಬೆಂಗಳೂರು, ದಿನಾಂಕ: 11ನೇ ಜನವರಿ 2005**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii) ರಡಿ ಸರ್ಕಾರವು ಶ್ರೀ ರಾಧಾಕೃಷ್ಣ ಮದನ್‌ಕರ್ ಕೆ.ಎ.ಎಸ್. ಅಧಿಕಾರಿ ಅವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cummulative effect) ತಡೆ ಹಿಡಿಯುವ ದಂಡನೆಯನ್ನು ವಿಧಿಸಿ ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್. 127

**ವಿಷಯ:** ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸಸಿವಿ 2002 ದಿನಾಂಕ: 11.3.2002.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 56 ಸಸಿವಿ 2003 ದಿನಾಂಕ: 21.6.2003.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 23 ಸಸಿವಿ 2004 ದಿನಾಂಕ: 4.5.2004.
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ವಇ 4308 ಪ್ರಕಾ 2004 ದಿನಾಂಕ: 21.12.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 11.3.2002ರ ಸರ್ಕಾರದ ಆದೇಶದಲ್ಲಿ ವಸತಿ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 10.1.2002 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸಲಾಗಿರುತ್ತದೆ. ನಂತರ ಕ್ರಮ ಸಂಖ್ಯೆ (2) ಮತ್ತು (3) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಈ ಹುದ್ದೆಯನ್ನು ದಿನಾಂಕ: 31.3.2005 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿರುತ್ತದೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ: 21.12.2004ರ ಟಿಪ್ಪಣಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2005 ರಿಂದ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 2005, ಬೆಂಗಳೂರು, ದಿನಾಂಕ: 12ನೇ ಜನವರಿ 2005**

ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿನ ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 1.4.2005 ರಿಂದ ಒಂದು ವರ್ಷದವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್. 128

**ತಿದ್ದೋಲೆ ಸಂಖ್ಯೆ: ಸಿಆಸುಇ 120 ಎಸ್‌ಇಎನ್ 97, ಬೆಂಗಳೂರು, ದಿನಾಂಕ: 11ನೇ ಜನವರಿ 2005**

ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 120 ಎಸ್‌ಇಎನ್ 97 ಬೆಂಗಳೂರು ದಿನಾಂಕ: 6.1.2005 ರಲ್ಲಿ ಆರೋಪಿತ ಅಧಿಕಾರಿಯ ಹೆಸರನ್ನು "ಹೆಚ್.ಎಸ್. ಸೇಠ್" ಬದಲಾಗಿ "ಹೆಚ್.ಹೆಚ್. ಸೇಠ್" ಎಂದು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 129

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ:** "ಹನಿ ನೀರಾವರಿಗಾಗಿ ಕೇಂದ್ರವಲಯ ಯೋಜನೆ" (2401-00-108-2-30) (ಯೋಜನೆ)ಯನ್ನು 2004-05ನೇ ಸಾಲಿನಲ್ಲಿ ಜಾರಿಗೊಳಿಸುವ ಬಗ್ಗೆ ಮಾರ್ಗಸೂಚಿಯಲ್ಲಿ ಪರಿಷ್ಕರಣೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಕೃತೋಇ 128 ತೋಯೋಕಾ 2003 ದಿನಾಂಕ: 10.09.2003.
2. ಸರ್ಕಾರದ ಆದೇಶ ಸಂಖ್ಯೆ:ಕೃತೋಇ 133 ತೋಯೋಕಾ 2004 ದಿನಾಂಕ: 28.5.2004.
3. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ತೋಇ/ಹನಿ/ಸತೋಅ/56/2003-04 ದಿನಾಂಕ: 16.8.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿ 2003-04ನೇ ಸಾಲಿನಲ್ಲಿ ತೋಟಗಾರಿಕೆ ಬೆಳೆಗಳಿಗೆ ಹನಿ ನೀರಾವರಿ ಉಪಕರಣಗಳನ್ನು ಖರೀದಿಸಿ ಅಳವಡಿಸುವ ರೈತರುಗಳಿಗೆ ಸಹಾಯಧನವನ್ನು ಒದಗಿಸಲು ತೋಟಗಾರಿಕೆ ನಿರ್ದೇಶಕರಿಗೆ ಆದೇಶ ನೀಡಲಾಗಿತ್ತು. ಬಿಜಾಪುರ ಮತ್ತು ಕೋಲಾರ ಜಿಲ್ಲೆಗಳಲ್ಲಿ ಎಲ್ಲಾ ರೈತರಿಗೆ ಶೇಕಡ 100 ರಷ್ಟು ಪ್ರಮಾಣದಲ್ಲಿ ಸಹಾಯಧನ ಒದಗಿಸಲು ಗಂಗಾಕಲ್ಯಾಣ ಯೋಜನೆಯಡಿ ಫಲಾನುಭವಿಗಳಿಗೆ ಎಲ್ಲಾ ಜಿಲ್ಲೆಗಳಲ್ಲಿ ಶೇಕಡ 100 ರಷ್ಟು ಸಹಾಯಧನ ಒದಗಿಸಲು ಹಾಗೂ ರಾಜ್ಯದ ಇತರೆ ಜಿಲ್ಲೆಗಳಲ್ಲಿ ರೈತರಿಗೆ ಶೇಕಡ 50ರ ಪ್ರಮಾಣದಲ್ಲಿ ಸಹಾಯಧನ ಒದಗಿಸಲು ಆದೇಶಿಸಲಾಗಿತ್ತು.

ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ 2004-05ನೇ ಸಾಲಿನಲ್ಲಿ ಹೆಚ್ಚಿನ ರೈತರಿಗೆ ಈ ಯೋಜನೆಯ ಲಾಭವನ್ನು ಒದಗಿಸಬೇಕೆಂದು ಉದ್ದೇಶಿಸಿ, ಎಲ್ಲ ಜಿಲ್ಲೆಗಳ ರೈತರಿಗೆ ಶೇಕಡ 50ರ ಪ್ರಮಾಣದಲ್ಲಿ ಹಾಗೂ ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ಎಲ್ಲ ಜಿಲ್ಲೆಗಳಲ್ಲಿ ಶೇಕಡ 100ರ ಸಹಾಯಧನ ಒದಗಿಸಲಾಗಿತ್ತು.

ಪ್ರಸಕ್ತ ಸಾಲಿನಲ್ಲಿ ಬಿಜಾಪುರ ಮತ್ತು ಕೋಲಾರ ಜಿಲ್ಲೆಯಲ್ಲಿ ಶೇಕಡ 100 ರಷ್ಟು ಸಹಾಯಧನ ಒದಗಿಸುವ ಬಗ್ಗೆ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 302 ತೋಯೋಕಾ 2004, ಬೆಂಗಳೂರು, ದಿನಾಂಕ: 18ನೇ ಜನವರಿ 2005**

ತೋಟಗಾರಿಕೆ ಇಲಾಖೆಯು ಅನುಷ್ಠಾನಗೊಳಿಸುತ್ತಿರುವ ಹನಿ ನೀರಾವರಿಗಾಗಿ ಕೇಂದ್ರ ವಲಯ ಯೋಜನೆಯಡಿ (2401-00-108-2-30) (ರಾಜ್ಯವಲಯ ಯೋಜನೆ) 2004-05ನೇ ಸಾಲಿನಲ್ಲಿ ಕೋಲಾರ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಎಲ್ಲಾ ರೈತರಿಗೆ ಶೇಕಡ 100 ರ ಪ್ರಮಾಣದಲ್ಲಿ ಸಹಾಯಧನ ಒದಗಿಸಲು ಅನುಮತಿಸಿ ಆದೇಶಿಸಲಾಗಿದೆ. ಉಳಿದಂತೆ ಸದರಿ ಯೋಜನೆಯ ಅನುಷ್ಠಾನದ ಮಾರ್ಗಸೂಚಿಯಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ. ಈ ಉದ್ದೇಶಕ್ಕಾಗಿ 2004-05ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯ ಆಯವ್ಯಯದಲ್ಲಿ ಒದಗಿಸಿರುವ 6 ಕೋಟಿ ರೂ.ಗಳಿಗೆ (ಆರು ಕೋಟಿ ರೂಪಾಯಿಗಳು ಮಾತ್ರ) ಸೀಮಿತಗೊಳಿಸಿ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 682 ವೆಚ್ಚ-4/04 ದಿನಾಂಕ: 11.1.2005 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 130

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ತಾಮ್ರಪತ್ರ ಹೊಂದಿರುವ ಸ್ವಾತಂತ್ರ್ಯ ಹೋರಾಟಗಾರರಿಗೆ ನೀಡುತ್ತಿರುವ ರಾಜ್ಯ ಗೌರವಧನವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:16.5.86ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 313 ಪಿಎಫ್‌ಎಸ್ 86.
2. ದಿನಾಂಕ:31.8.87ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 1040 ಪಿಎಫ್‌ಎಸ್ 87.
3. ದಿನಾಂಕ:30.6.89ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 476 ಪಿಎಫ್‌ಎಸ್ 89.
4. ದಿನಾಂಕ:11.7.91ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 40 ಪಿಎಫ್‌ಎಸ್ 91.
5. ದಿನಾಂಕ:8.10.92ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 47 ಪಿಎಫ್‌ಜಿ 92.
6. ದಿನಾಂಕ:8.8.97ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 181 ಪಿಎಫ್‌ಜಿ 95.
7. ದಿನಾಂಕ:23.11.2000ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 222 ಪಿಎಫ್‌ಜಿ 98.

**ಪ್ರಸ್ತಾವನೆ:**

ಉಲ್ಲೇಖ (1) ರಿಂದ (6)ರ ತನಕ ಓದಲಾಗಿರುವ ಸರ್ಕಾರದ ಆದೇಶದಲ್ಲಿ, ದೇಶದ ಸ್ವಾತಂತ್ರ್ಯಕ್ಕಾಗಿ ಸ್ಮರಣೀಯವಾಗಿ ಸೇವೆ ಸಲ್ಲಿಸಿದ ಹಾಗೂ ತ್ಯಾಗ ಮಾಡಿದ ಸ್ವಾತಂತ್ರ್ಯ ಹೋರಾಟಗಾರರಿಗೆ ರಾಜ್ಯ ಗೌರವಧನವನ್ನು ಕಾಲಕಾಲಕ್ಕೆ ಹೆಚ್ಚಿಸಿ ನೀಡಲಾಗುತ್ತಿದೆ.

ಉಲ್ಲೇಖ (7)ರಲ್ಲಿ ಓದಲಾದ ದಿನಾಂಕ:23.11.2000ದ ಸರ್ಕಾರದ ಆದೇಶದಲ್ಲಿ, ಸ್ವಾತಂತ್ರ್ಯ ಯೋಧರಿಗೆ ನೀಡುತ್ತಿದ್ದ ಗೌರವಧನವನ್ನು, ಭಾರತದ ಸ್ವಾತಂತ್ರ್ಯದ ಸುವರ್ಣ ಮಹೋತ್ಸವದ ಜ್ಞಾಪಕಾರ್ಥವಾಗಿ ದಿನಾಂಕ:1.9.2000ರಿಂದ ಜಾರಿಗೆ ಬರುವಂತೆ ಮಾಹೆಯಾನ 750/-ರೂ.ಗಳಿಂದ 1000/- ರೂ.ಗಳಿಗೆ ಹೆಚ್ಚಿಸಲಾಗಿದೆ.

ಈಗ ತಾಮ್ರ ಪತ್ರ ಹೊಂದಿರುವ ಸ್ವಾತಂತ್ರ್ಯ ಹೋರಾಟಗಾರರಿಗೆ ಹಾಲಿ ನೀಡುತ್ತಿರುವ ಗೌರವಧನವನ್ನು (ತಾಮ್ರಪತ್ರ ಹೊಂದಿರುವ ಸ್ವಾತಂತ್ರ್ಯ ಹೋರಾಟಗಾರರಿಗೆ ಮಾತ್ರ ಅನ್ವಯವಾಗುವಂತೆ) ಮಾಹೆಯಾನ ರೂ.1000/-ಗಳಿಂದ ರೂ.1200/-ಗಳಿಗೆ ಹೆಚ್ಚಿಸಲು ಸರ್ಕಾರ ತೀರ್ಮಾನಿಸಿರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 16 ಪಿಎಫ್‌ಜಿ 2004, ಬೆಂಗಳೂರು, ದಿನಾಂಕ: 6ನೇ ಜನವರಿ 2005**

ತಾಮ್ರಪತ್ರ ಹೊಂದಿರುವ ಸ್ವಾತಂತ್ರ್ಯ ಯೋಧರಿಗೆ ಮಾತ್ರ ಅನ್ವಯವಾಗುವಂತೆ ಹಾಲಿ ನೀಡುತ್ತಿರುವ ಗೌರವಧನವನ್ನು ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಮಾಹೆಯಾನ 1000/- ರೂ.ಗಳಿಂದ 1200/-(ಒಂದು ಸಾವಿರದ ಎರಡು ನೂರು ರೂಪಾಯಿಗಳು ಮಾತ್ರ) ರೂಪಾಯಿಗಳಿಗೆ ಹೆಚ್ಚಿಸಲಾಗಿದೆ.

ಈ ರೀತಿ ಹೆಚ್ಚುವರಿಯಾಗಿರುವ ರೂ.200/-ಗಳ ಗೌರವಧನವನ್ನು ಪಡೆದುಕೊಳ್ಳಬಯಸುವ ಸ್ವಾತಂತ್ರ್ಯ ಯೋಧರು ತಮ್ಮ ತಾಮ್ರಪತ್ರವನ್ನು ಸಂಬಂಧಪಟ್ಟ ಸಹಾಯಕ ಕಮೀಷನರ್ ರವರಿಗೆ ಪರಿಶೀಲನೆಗಾಗಿ ಸಲ್ಲಿಸತಕ್ಕದ್ದು. ಸಹಾಯಕ ಕಮೀಷನರ್‌ರವರು ಇದನ್ನು ಉಪ ವಿಭಾಗ ಮಟ್ಟದ ಸಮಿತಿ ಮುಂದೆ ಮಂಡಿಸಿ, ಪರಿಶೀಲಿಸಿದ ನಂತರ ಸಮಿತಿಯ ನಿರ್ಣಯವನ್ನು ಜಿಲ್ಲಾಧಿಕಾರಿಯವರಿಗೆ ಕಳುಹಿಸುವುದು. ಜಿಲ್ಲಾಧಿಕಾರಿಗಳು ಅದನ್ನು ಪರಿಶೀಲಿಸಿ, ಅರ್ಹರಾದ ಸ್ವಾತಂತ್ರ್ಯ ಹೋರಾಟಗಾರರ ಹೆಸರನ್ನು ಮೇಲ್ಕಂಡಂತೆ ಹೆಚ್ಚಿಸಿದ ಗೌರವಧನ ಬಿಡುಗಡೆ ಮಾಡಲು ಸಂಬಂಧಿಸಿದ ಖಜಾನೆ ಅಧಿಕಾರಿಗಳಿಗೆ ಶಿಫಾರಸ್ಸು ಮಾಡಿ ಕಳುಹಿಸಿ ಕೊಡುವುದು ಹಾಗೂ ಮಾಹಿತಿಯನ್ನು ಸರ್ಕಾರಕ್ಕೆ ಕಳುಹಿಸಿಕೊಡುವುದು. ಜಿಲ್ಲಾಧಿಕಾರಿಗಳ ಶಿಫಾರಸ್ಸಿನನ್ವಯ ಸಂಬಂಧಿಸಿದ ಖಜಾನಾಧಿಕಾರಿಗಳು ತಾಮ್ರಪತ್ರ ಹೊಂದಿದ ಸ್ವಾತಂತ್ರ್ಯ ಹೋರಾಟಗಾರರಿಗೆ ಮಾಹೆಯಾನ ರೂ.1,200/-(ಒಂದು ಸಾವಿರದ ಎರಡು ನೂರು ರೂಪಾಯಿಗಳು ಮಾತ್ರ)ಗಳನ್ನು ಪಾವತಿಸುವುದು.

ಈ ಆದೇಶವನ್ನು ದಿನಾಂಕ:1.12.2004ರಂದು ಆರ್ಥಿಕ ಇಲಾಖೆಯು ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 2009 ವೆ-5/2004ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಕೃಷ್ಣಮೂರ್ತಿ**
ಪಿ.ಆರ್. 131 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜಕೀಯ ವಿಶ್ರಾಂತಿ ವೇತನ)

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ತಿದ್ದುಪಡಿ ಆದೇಶ ಸಂಖ್ಯೆ:ಪಸಂಮೀ 25 ಪಸಸೆ 2004, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2004**

2002-03ನೇ ಸಾಲಿನಲ್ಲಿ ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಿದ ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ 403 ಪಸಸೆ 2002ರ ದಿನಾಂಕ: 27.10.2003ರ ತಿದ್ದುಪಡಿ ಆದೇಶದಲ್ಲಿ ಹೊರಡಿಸಲಾದ ಆದೇಶವನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ.

| ಕ್ರಮ ಸಂಖ್ಯೆ | ತಿದ್ದುಪಡಿ ಆದೇಶದ ನಮೂದಾಗಿರುವ ಸ್ಥಳ | ತಿದ್ದುಪಡಿ ಮಾಡಲಾದ ಸ್ಥಳ |
|---|---|---|
| 1 | ಸುಗ್ಗನಹಳ್ಳಿ ಎಂಬುದನ್ನು | ಕ್ರಮ ಸಂಖ್ಯೆ:6ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ತಾಲ್ಲೂಕಿನ ಹುಲಿಕೆರೆ ಎಂದು ಓದಿಕೊಳ್ಳತಕ್ಕದ್ದು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಚಂದ್ರಶೇಖರ್ ರಾವ್**
ಪಿ.ಆರ್. 132 ಪೀಠಾಧಿಕಾರಿ (ಪ್ರ), ಪಶುಸಂಗೋಪನೆ-ಎ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

**DEPARTMENT OF PERSONNEL AND ADMINISTRATIVE REFORMS SECRETARIAT**

**Sub:** Payment of advance salary to Sri Y.R. Patil, IPS

**Read:**
1. Government Notification No.DPAR 13 SPS 2004 (P) dated: 20.9.2004.
2. Letter No.CB3/24/2003-04 dated 19.10.2004 of Director General and Inspector General of Police, Bangalore.
3. Government letter No.DPAR 27 SPS 2004 dated 16.11.2004.
4. Central Administrative Tribunal, Bench-Bangalore, order dated 5.1.2005.
5. Letter No. CB3/24/CL/2003-04 dated 10.1.2005 of Director General and Inspector General of Police, Bangalore.

**Preamble:-**

In the Government Notification No.DPAR 13 SPS 2004(P) dated 20.9.2004, read at (1) above, Sri Y.R. Patil, IPS (KN 79), Inspector General of Police Southern Range, Mysore, was transferred with immediate effect and his services were placed at the disposal of Education Department (Higher Education) to post him as Registrar, Karnataka State Open University, Mysore, in the existing vacancy.

Sri Y.R. Patil filed an application No.577/2004 before the Hon'ble Central Administrative Tribunal, Bangalore Bench, questioning the above posting order and praying to grant an interim order of stay.

The Director General and Inspector General of Police in his letter dated 19.10.2004 read at (2) above, forwarded leave application dated 24.9.2004 of Sri Y.R. Patil, IPS, for sanction of Earned Leave from 21.9.2004 to 31.10.2004 on medical grounds and in turn the Director General & Inspector General of Police was requested to furnish the medical certificate along with his remarks vide Government letter dated 16.11.2004 read at (3) above. The Director General and Inspector General of Police, Bangalore in his letter dated 10.1.2005 read at (5) above, has stated that Sri Y.R. Patil, IPS was requested to furnish a medical certificate vide their letters dated 2.12.2004 and 6.1.2005 and that Sri Y.R. Patil has not furnished any medical certificate so far Sri Y.R. Patil has not applied for any leave after 31.10.2004.

The Hon'ble Central Administrative Tribunal, Bangalore Bench, Bangalore, in its order dated 5.1.2005 read at (4) above, in application No.577/2004 filed by Sri Y.R. Patil, IPS (KN 79), directed the respondents to release a sum of Rs.50,000/- as an interim measure within a period of two weeks from the date of order which shall be adjustable on the disposal of the present O.A.

**Government Order No. DPAR 102 SPS 2004, Bangalore, Dated: 12th January 2005**

In the circumstances explained in the preamble, a sum of Rs.50,000/- (Rupees fifty thousand only) is sanctioned to Sri Y.R. Patil, IPS, as salary advance which shall be adjustable on the disposal of O.A. No. 577/2004 filed by Sri Y.R. Patil, IPS, before the Central Administrative Tribunal, Bangalore Bench, Bangalore. This advance will be first charge on and shall be adjustable from any emoluments that may be payable to him hereafter.

This amount shall be debitable to the head of account "8550-Civil Advances-104-other advances-0-25-Advance of pay and other emoluments to IPS officers"

This issues with the concurrence of Finance Department vide Secretary to Government (Expenditure), Finance Department's endorsement No.16/2005 dated 12.01.2005.

By Order and in the name of the Governor of Karnataka,

P.R. 133

**S. SELVAKUMAR**

Deputy Secretary to Government, DPAR (Services)

**Govt Order No. DPAR 61 SFP 2004, Bangalore, Dated: 11th January 2005**

**Sub:** Revocation of suspension and posting of Sri A.M. Annaiah. IFS (KN 85).

**Read:**
1. G.O.No. DPAR 31 SFP 2003 dated 28.02.2003.
2. G.O.No. DPAR 31 SFP 2003 dated 24.05.2003.
3. G.O.No. DPAR 71 SFP 2003 dated 28.05.2003.
4. G.O.No. DPAR 31 SFP 2003 dated 17.11.2003 & 22.01.2004.
5. G.O.No. DPAR 71 SFP 2003 dated 28.11.2003.
6. G.O.No. DPAR 71 SFP 2003 dated 27.02.2004.
7. G.O.No. DPAR 71 SFP 2003 dated 28.08.2004.
8. Judgement dated 24.12.2004 in O.A. No. 333/2004 filed by Sri A.M. Annaiah, IFS, before the CAT, Bangalore.

Whereas an order placing Sri A.M. Annaiah, IFS (KN 85) the then Deputy Conservator of Forests, Wildlife Division, Hunsur under suspension was issued by the Government of Karnataka vide G.O. dated 28.2.2003 read at Sl. No. (1) above, pending institution of a regular disciplinary proceedings for his alleged misbehaviour with girl students of NSS Camp at the Nagarahole National Park, in the 2nd Inter Directorate University State Level NSS Camp organized from 29.12.2002 to 07.01.2003 jointly by the Directorate of Technical Education and Wildlife Division of Forest Department.

Whereas the Government of Karnataka vide G.O. dated 28.5.2003, 28.11.2003, 27.02.2004 and 28.08.2004 read at Sl. No. (3), (5), (6) and (7) above, has extended the period of suspension of Sri A.M. Annaiah, IFS (KN 85) from time to time as per the recommendation of the Review Committee constituted as per G.O. dated 24.5.2003 read at (2) above.

Whereas, the Government of Karnataka has instituted a departmental enquiry against Sri A.M. Annaiah, IFS, into the charges levelled against him as above vide G.O. dated 17.11.2003 & 22.01.2004 read at Sl.No. (4) above.

Whereas, Sri A.M. Annaiah, IFS, has filed an O.A. No. 333/2004 before the Hon'ble CAT requesting to reinstate him and issue posting orders.

Whereas, the Hon'ble CAT in its judgement dated 24.12.2004 read at Sl.No. (8) above directed the respondents to reinstate the applicant in service within 2 weeks from the date of the receipt of a copy of the order.

Whereas the Government of Karnataka in accordance with the direction of Hon'ble CAT has decided to reinstate him in service pending disciplinary proceedings against him.

Now, therefore, the Government of Karnataka in exercise of the powers conferred by rule 3 (7) of All India Service (Disciplinary & Appeal) Rules, 1969, hereby revoke the order of suspension and reinstate Sri A.M. Annaiah, IFS, in service with immediate effect pending proceedings against him.

On reinstatement into service, Sri A.M. Annaiah, IFS, is posted as Deputy Conservator of Forests, Wildlife Division, Karkala, in the existing vacancy.

By Order and in the name of the Governor of Karnataka,

P.R. 134

**S. SELVAKUMAR**

Deputy Secretary to Government, DPAR (Services)

## ಕಂದಾಯ ಸಚಿವಾಲಯ

**ಅಧಿಸೂಚನೆ ಸಂಖ್ಯೆ:ಕಂಇ 65 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ 12ನೇ ಜನವರಿ 2005**

ಮೆ: ಧರಿತ್ರಿ ಟ್ರಸ್ಟ್(ರಿ), 56, 11ನೇ ಮುಖ್ಯ ರಸ್ತೆ, ಮಲ್ಲೇಶ್ವರ, ಬೆಂಗಳೂರು-3 ಇ ವರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲೂಕು, ಸೋಂಪುರ ಹೋಬಳಿ, ನರಸೀಪುರ ಗ್ರಾಮದ ಸರ್ವೆ ನಂಬರ್ 6/1 ರಲ್ಲಿ 5.20 ಎಕರೆ ಜಮೀನನ್ನು ಬುದ್ಧಿಮಾಂದ್ಯ ಮತ್ತು ದೈಹಿಕ ಅಂಗವಿಕಲ ಗಂಡು ಮತ್ತು ಹೆಣ್ಣು ಮಕ್ಕಳ ವಸತಿ ಶಾಲೆಯ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇ ವರು ತಮ್ಮ ಪತ್ರ ಸಂಖ್ಯೆ:ಎಲ್‌ಆರ್‌ಎಫ್/ಎಸ್ ಆರ್/18/03-04, ದಿನಾಂಕ 22.7.2004 ಮತ್ತು 23.9.2004ರ ಪತ್ರಗಳಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರಿನಲ್ಲಿ ಒಟ್ಟು: 5.20 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1ಎ) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ, 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ ಗಳು ಹಾಗೂ ಇ ನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಇಷ್ಟೇ ವಿಸ್ತೀರ್ಣದ ಭೂಮಿಯನ್ನು ಹೊಂದಲು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಲ್ಲಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995 ರ ಕಲಂ 109(1ಎ) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996 ರ ನಿಯಮ 38(ಬಿ) ಮತ್ತು (ಸಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲೂಕು, ಸೋಂಪುರ ಹೋಬಳಿ, ನರಸೀಪುರ ಗ್ರಾಮದ ಸರ್ವೆ ನಂಬರ್ 6/1 ರಲ್ಲಿ 5.20 ಎಕರೆ ಜಮೀನನ್ನು ಮೆ: ಧರಿತ್ರಿ ಟ್ರಸ್ಟ್(ರಿ), 56, 11ನೇ ಮುಖ್ಯ ರಸ್ತೆ, ಮಲ್ಲೇಶ್ವರ, ಬೆಂಗಳೂರು-3 ಇ ವರಿಗೆ ಬುದ್ಧಿಮಾಂದ್ಯ ಮತ್ತು ದೈಹಿಕ ಅಂಗವಿಕಲ ಗಂಡು ಮತ್ತು ಹೆಣ್ಣು ಮಕ್ಕಳ ವಸತಿ ಶಾಲೆಯ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109(1ಎ) ಅಡಿ ವಿನಾಯ್ತಿ ನೀಡಿ, ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಸರ್ಕಾರದ ಅನುಮತಿ ನೀಡಲಾಗಿದೆ:-

(1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

(2) ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956 ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇ ತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

(3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

(4) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.

(5) ಶಿಕ್ಷಣ ಸಂಸ್ಥೆ ಆರಂಭಿಸುವ ಮುನ್ನ ಶಿಕ್ಷಣ ಇ ಲಾಖೆ ಮತ್ತು ಸಮಾಜ ಕಲ್ಯಾಣ ಇ ಲಾಖೆಯ ಅನುಮತಿಯನ್ನೂ ಸಹ ಪಡೆಯತಕ್ಕದ್ದು.

(6) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ನೀಡಲು ಮಾತ್ರವಾಗಿರುತ್ತದೆ. ಇ ತರೆ ಯಾವುದೇ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶ ವಿರುತ್ತದೆ.

(7) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇ ಲಾಖೆ, ಅಭಿವೃದ್ಧಿ ಪ್ರಾಧಿಕಾರ, ಸ್ಥಳೀಯ ಪ್ರಾಧಿಕಾರ, ಇ ತ್ಯಾದಿ ಗಳಿಂದ ಅನುಮೋದನೆ ಪಡೆಯತಕ್ಕದ್ದು.

(8) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

ಪಿ.ಆರ್. 135

**ಕೆ. ನರಸಿಂಹಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇ ಲಾಖೆ (ಭೂಸುಧಾರಣೆ)

## FINANCE SECRETARIAT

**Sub:** Revision of Karnataka Financial Code and Manual of Contingent Expenditure – regarding.

**Read:** i) E-Mail dated 17 November 2003 from Ms Paramita Dasgupta, Economist, World Bank Office, New Delhi to Secretary, Expenditure, Finance Department.

ii) Govt Notification No. FD 71 FC-3 2004 dated 13 February 2004.

iii) Govt letter No. PWD 146 SO/FC 2003 dated 30.04.2004 to M/s SG Associates, Bangalore.

iv) Letter dated 21.10.2004 addressed to Secretary,Expenditure, Finance Department by M/s SG Associates, Bangalore.

**Preamble:**

In its Country Procurement Assessment Report (CPAR) given to the State Government by the World Bank, for procurement reforms, it has been recommended that the old codes and manuals - such as the Karnataka Financial Code (KFC), the Manual of Contingent Expenditure (MCE) etc., may be revised.

Standing Committee appointed by Government for looking into the implementation aspects of CPAR has decided that Working Groups may be constituted for Review of KFC, MCE etc.

In the Notification read at no. (ii) above, the Govt. notified that provisions of the Karnataka Transprency in Public Procurements Act shall not apply for engaging consultancy services in connection with Review of KFC by the FD.

Government in its letter read at no. (iii) above, requested M/s SG Associates, (S.Gopalswami and Associates), Bangalore to consider taking up the work on consultancy basis, as this firm has persons with adequate expertise and experience for taking up the task. M/s.S.G.Associates conveyed their confirmation for the same in their letter read at no. (iv) above. Suggestion was also made for including the revision of the Manual of Contingent Expenditure (MCE) along with KFC. After examining all aspects in the matter, following orders are issued.

**ORDER NO. PWD 146 SO/FC 2003, Bangalore, Dated 27th December 2004**

Government is pleased to appoint M/s.S.G. Associates (S.Gopalswami and Associates), Banashankari III stage, Bangalore-85 as Consultants for a period of six months with immediate effect for taking up the revision of Karnataka Financial Code (KFC) Volumes-I & II and the Manual of Contingent Expenditure (MCE).

2. The consultants shall complete the work in 6 months from the date of this Order.

3. In Finance Department there shall be a Working Group to review the completed revised draft chapters of the Codes and Manuals and suggest improvements/changes, if any. The Deputy Secretary-III, Finance Department shall be the Member- Secretary of the Group.

4. The Consultants shall take into consideration all the necessary and appropriate actions for the said revision as per the Terms of Reference (TOR) attached to this Order and the guidance from the Working Group from time to time.

5. The consultants shall submit eight copies of the draft chapters as and when they are ready for review by the Working Group. The Working Group shall furnish their comments on the draft chapters within 10 days time. The consultants shall arrange to furnish the chapters keeping in view the overall time limit of 6 months.

6. The Consultants shall submit to the Government the finally approved chapters of the KFC Volumes-I & II and the MCE in book form in six hard copies and a soft copy (CD).

7. The Consultants shall be paid a total sum of Rs.6.60 lakhs (Rs. Six lakhs and sixty thousand only) as consultation fee to be paid in installments as per the following arrangement:

i) 20% as advance for commencing the work;

ii) 30% after all the chapters of KFC Volume-I are revised, approved for printing;

iii) 20% after completion of review of Volume-II of KFC, approval for printing;

iv) 20% after completion of review of MCE, approval for printing;

v) 10% final payment after submission of the final copies.

8. The consultants shall undertake to enter into an agreement to take up the review of KFC & MCE as per the TOR (in Annexure) on a stamp paper of Rs.100/-. 20% advance shall be given to the consultants after the agreement is furnished. Draft agreement shall be got approved from the Finance Department.

9. Expenditure on account of this matter may be debited to the provision "2052-00-090-0-07-FD - Library, Research Cell and Other charges-051-General Expenses" under Non Plan.

This order issues under the powers delegated to the Secretary to Government, Finance Department under FD 1 TFP 96 dated 10.07.1996 and FD 1 TFP 2003 dated 12.06.2003.

By Order and in the name of the Governor of Karnataka

**ASHOK S. JIVARGI**

Under Secretary to Government, PWD FC, Finance Department.

**Annexure**

**Terms of Reference for Revision of Karnataka Financial Code and Manual of Contingent Expenditure**

The Karnataka Financial Code was compiled and issued shortly after the present State of Karnataka was formed in 1956 on the re-organization of States. After the issue of the compilation several changes have taken place in the State's financial and accounting set-up. The changes relate to areas such as the arrangements for receipt and custody of Government revenues, withdrawal and disbursement of funds, accounting thereof, the role of audit and the relations of departments with audit, the duties and responsibilities of Government servants, etc. Many of these changes have been effected as response to the emerging requirements in dealing with the finances of the State which have arisen both by expansion of Governmental activities and by increasing complexity in transactions. Although corrections to the Code consequent to these changes have been issued from time to time, there is a need to review the provisions of the Code to make it cater adequately to the needs, as they exist now. It is therefore felt necessary to review the Code in its entirely and to modify it suitably in a manner that would ensure that it serves the purpose fully in the present day context.

Similarly the manual of Contingent Expenditure also needs revision. Government proposes to entrust the task of revising the Code and the Manual and suggesting modifications to these to a team of consultants who are well versed with the financial rules and procedures of Government.

**Scope of the work:**

The scope of the work shall include Revision of Volume-I of the Karnataka Financial Code containing the main provisions as well as Volume-II containing forms and appendices and the Manual of Contingent Expenditure.

The revised Code and the Manual should not only capture and present changes effected over the years but also be oriented to meet the future requirements.

**Obligations of Government:**

i) The Government shall nominate an officer to coordinate and monitor the work of Consultants. The nominated officer shall be responsible for liaising with the consultants and providing from the Government end, all assistance to them in their work.

ii) In addition, the Government shall constitute a small working group or consultative committee of a few selected senior officers to consider and give decisions on discussion papers, which may be presented by the consultants. The nominated officer mentioned above shall be the Member-Secretary of the group/ committee. Depending on the topics that are slated for discussion, the nominated officer may invite representatives from the concerned departments to attend meetings of the group/ committee.

iii) Government shall take steps to provide requisite material to the consultants to enable them to update the Code and the Manual with reference to all the correction slips and other Government orders, notifications, etc., issued subsequent to the last revision made to the Code and the Manual.

**Obligations of the Consultants:**

The approach to the task and the plan of action to be followed for revising the Code and the Manual would be broadly as under;

i) The consultants shall update the Code and the Manual with reference to all the correction slips and other Government orders, notifications, etc., issued subsequent to the last revision made to the Code and the Manual. This activity may be taken up and completed independently without allowing it to be influenced by the pace at which the other activities progress.

ii) The consultants shall make a thorough review of the existing system of rules and procedures relevant to the task assigned to them. The procedures as laid down in the State rules as well as the Central rules will have to be studied. A holistic approach to the task is required. The consultants shall, initially and from time to time thereafter, take an overall look at the existing compilation with a view to identifying the areas that require substantial changes.

iii) The consultants shall suggest deletion of, or modifications to, all rules or provisions, which have become redundant or have outlived their purpose or utility.

iv) The consultants shall propose suitable changes in the rules, procedures, etc., in the light of new innovations and changes. In this exercise, it is not enough if the changes or innovations introduced already are considered. To the extent that they can be anticipated, changes and innovations that are likely to come through in the near future may also be considered. Some of the developments to be taken into account in this exercise may include receipt of moneys through collection kiosks or credit cards, ECS

ಗೋಪಾಲಕೃಷ್ಣ ಸ್ವಾಮಿ ಎಂದು ನಮೂದಿಸಿದ ರೂ. 85,150.00 ಕೊಡುವಂತೆ ಚೆಕ್ ಬರೆದು, ಚೆಕ್‌ನಲ್ಲಿ ಸಹ ಝೋಟಾ ನಕಲು ಸಹಿ ಮಾಡಿ ಡಿಸಿಪಿ (ದ) ರವರ ಸಹಿಯನ್ನು ಫೋರ್ಜರಿ ಮಾಡಿ ರೂ. 85,150.00 ಗಳನ್ನು ಪಡೆದುಕೊಂಡು ಸರ್ಕಾರಕ್ಕೆ ಮೋಸ ಮಾಡಿ, ಪೊಲೀಸ್ ಇಲಾಖೆಯ ಘನತೆಗೆ ಕುಂದು ಬರುವಂತೆ ಮಾಡಿ ಕರ್ತವ್ಯದಲ್ಲಿ ತೀವ್ರತರ ದುರ್ನಡತೆ ಪ್ರದರ್ಶಿಸಿರುತ್ತೀರಿ.

ದಿನಾಂಕ: 2.8.97 ರಂದು ಪಿಸಿ 4589 ಶ್ರೀ ವೆಂಕಟರಾಂ, ಜಯನಗರ ಠಾಣೆ ಇವರಿಗೆ ಕೆ.ಜಿ.ಐ.ಡಿ. ಇಲಾಖೆಯಿಂದ ಮಂಜೂರಾದ ಸಾಲದ ಬಾಬ್ತು ರೂ. 14,608.00 ಚೆಕ್ ಅಂಚೆ ಮೂಲಕ ಬಂದಿದ್ದು ಪಿಸಿ 2198, ಎಂ.ಹೆಚ್. ಜಯಣ್ಣ, ಆದ ನೀವು ನಕಲು ಸಹಿ ಹಾಕಿ ರೂ. 14,608.00 ನ್ನು ಬ್ಯಾಂಕಿನಿಂದ ಪಡೆದು ಮೋಸ ಮಾಡಿದ ಬಗ್ಗೆ ನಿಮ್ಮ ವಿರುದ್ಧ ಜಯನಗರ ಠಾಣೆ ಮೊ.ಸಂ. 622:97 ಕಲಂ 419, 468, 420 ಐಪಿಸಿ ದಾಖಲಾಗಿದ್ದು ದಿನಾಂಕ: 25.6.98 ರಂದು ನೀವು ದಸ್ತಗಿರಿಯಾಗಿರುವುದು ನಿಮ್ಮ ದುರ್ನಡತೆಯನ್ನು ಪ್ರದರ್ಶಿಸಿದೆ."

ಮೇಲ್ಕಂಡ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದ್ದರಿಂದ, ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡಿಸಿಪಿ, ದಕ್ಷಿಣ ವಿಭಾಗ, ಬೆಂಗಳೂರು ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ: 19.3.2002 ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಮೇಲೆ (2) ರಲ್ಲಿ ಓದಲಾದ ದಿನಾಂಕ: 5.10.2002 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿದ್ದು, ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

ತಾನು ಹರಿಜನ ಕೋಮಿಗೆ ಸೇರಿದವನೆಂದು, ತನಗೂ ಜಯನಗರ ಬರಹಗಾರರಾದ ಪಿಸಿ 4707 ಶ್ರೀ ಶಿವಲಿಂಗಯ್ಯ ನವರಿಗೆ ವೈಮನಸ್ಯವಿತ್ತೆಂದೂ, ಇಲಾಖಾ ವಿಚಾರಣೆಯಲ್ಲಿ ತನ್ನನ್ನು ರಕ್ಷಿಸಿಕೊಳ್ಳಲು ಸಾಕಷ್ಟು ಅವಕಾಶ ನೀಡಲಿಲ್ಲವೆಂದು, ಹಾಗೂ ಅಗತ್ಯ ದಾಖಲೆಗಳನ್ನು ತನಗೆ ನೀಡಿರುವುದಿಲ್ಲವೆಂದೂ, ಬ್ಯಾಂಕ್ ಅಧಿಕಾರಿಗಳು ಆರೋಪಗಳನ್ನು ಗುರ್ತಿಸುವಾಗ ತಾವು ಠಾಣೆಯಲ್ಲಿಯೇ ಇರಲಿಲ್ಲವೆಂದೂ ದಿನಾಂಕ: 7.7.1997 ರಂದೇ ಹಣವನ್ನು ವಶಪಡಿಸಿಕೊಂಡಿದ್ದು, ದಿನಾಂಕ: 8.7.97 ರಂದು ತಮ್ಮ ಮನೆಯಲ್ಲಿ ವಶಪಡಿಸಿಕೊಂಡಂತೆ ಸುಳ್ಳು ದಾಖಲೆ ಸೃಷ್ಟಿಸಿರುತ್ತಾರೆಂದು, ಠಾಣೆಯ ಲೆಕ್ಕಪತ್ರ ದಾಖಲೆಯನ್ನು ಪರಿಶೀಲಿಸಿದಲ್ಲಿ ರೂ. 85,150.00 ಗಳನ್ನು ದುರುಪಯೋಗವಾಗಿದೆ ಎಂಬ ಬಗ್ಗೆ ಸ್ಪಷ್ಟವಾಗುತ್ತದೆಯೆಂದು ತಿಳಿಸಿರುತ್ತಾರೆ.

ಮೇಲ್ಕಂಡ ವಾದಾಂಶಗಳನ್ನು ಅವರ ಮೇಲಿನ ಆರೋಪಗಳನ್ನು ಅಲ್ಲಗಳೆಯುವಂತಹ ಯಾವುದೇ ಅಂಶಗಳನ್ನು ಮಂಡಿಸಿರುವುದಿಲ್ಲ ಮತ್ತು ಯಾವುದೇ ಪುರಾವೆಗಳನ್ನು ಒದಗಿಸಿರುವುದಿಲ್ಲ. ಅತ್ಯಂತ ಗುರುತರವಾದ ಆಪಾದನೆಯ ಬಗ್ಗೆ ನಿಯಮಾನುಸಾರ ನಡೆದ ಇಲಾಖಾ ವಿಚಾರಣೆಯಲ್ಲಿ ಅರ್ಜಿದಾರರ ಮೇಲಿನ ಆರೋಪಗಳು ನಿಸ್ಸಂದೇಹವಾಗಿ ಸಾಬೀತಾಗಿದೆ. ಇಲಾಖಾ ವಿಚಾರಣೆಗೆ ಸೂಕ್ತ ವೇಳೆಯಲ್ಲಿ ಸಹಕರಿಸದೆ ವಿನಾಕಾರಣ ವಿಳಂಬ ಮಾಡಲು ಪ್ರಯತ್ನಿಸಿದ್ದು, ಡಿಸಿಪಿ (ದಕ್ಷಿಣ ವಿಭಾಗ) ರವರ ಸಹಿಯನ್ನು ಫೋರ್ಜರಿ ಮಾಡಿ ರೂ. 85,150.00 ಗಳನ್ನು ಬ್ಯಾಂಕಿನಿಂದ ಡ್ರಾ ಮಾಡಿಕೊಂಡಿರುವುದು ಅರ್ಜಿದಾರರೇ ಫೋರ್ಜರಿ ಮಾಡಿರುವುದಕ್ಕೆ ಅತ್ಯಂತ ಪ್ರಮುಖ ಮತ್ತು ನಂಬಲರ್ಹ ಸಾಕ್ಷಿಯವರ ಹೇಳಿಕೆ, ಬ್ಯಾಂಕಿನಿಂದ ಅರ್ಜಿದಾರರೇ ಹಣ ಪಡೆದುಕೊಂಡ ಬಗ್ಗೆ ಬ್ಯಾಂಕಿನ ಅಧಿಕಾರಿಗಳು ಗುರ್ತಿಸಿರುವ ಹಿನ್ನೆಲೆಯಲ್ಲಿ, ಅರ್ಜಿದಾರರ ವಿರುದ್ಧದ ಆರೋಪವು ಯಾವುದೇ ಸಂಶಯಕ್ಕೆ ಎಡೆ ಮಾಡಿಕೊಡದೇ ಸಾಬೀತಾಗಿರುತ್ತದೆ. ಈ ಆರೋಪಕ್ಕೆ ಶಿಸ್ತು ಪ್ರಾಧಿಕಾರ ಮತ್ತು ಮೇಲ್ಮನವಿ ಪ್ರಾಧಿಕಾರ ವಿಧಿಸಿರುವ ಶಿಕ್ಷೆಯು ಸಮಂಜಸವಾಗಿದ್ದು, ಇದರಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬಂದಿರುವುದಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಒಇ 81 ಪೊಸಿಅ 2003, ಬೆಂಗಳೂರು, ದಿನಾಂಕ: 12ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಹೆಚ್. ಜಯಣ್ಣ, ಮಾಜಿ ಪಿಸಿ 2198, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 475

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಅಲ್ಲಾಭಕ್ಷ್, ಮಾಜಿ ಪಿಐ ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಆದೇಶ ಸಂ. ಸಿಬಿ:8:27:1999-2000 ದಿ: 12.4.2004.
2) ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿ ದಿನಾಂಕ: 14.5.2004.

**ಪ್ರಸ್ತಾವನೆ:**

ಶ್ರೀ ಅಲ್ಲಾಭಕ್ಷ್, ಪೊಲೀಸ್ ಇನ್ಸ್‌ಪೆಕ್ಟರ್, ಕೆ.ಜಿ.ಎಫ್. ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

1. "ದಿನಾಂಕ: 15.3.1997 ರಂದು ರಾತ್ರಿ ಸುಮಾರು 7.30 ಗಂಟೆಯಲ್ಲಿ ಲಾರಿ ಸಂ. ಕೆಎ-40-8118 ನ್ನು ಜಪ್ತಿ ಮಾಡಿದ್ದು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ ತಲಾ 25 ಕೆ.ಜಿ. ತೂಕವುಳ್ಳ 25 ಕ್ಯಾನ್‌ಗಳ ಶ್ರೀಗಂಧದ ಎಣ್ಣೆಯನ್ನು ಅಮಾನತ್ತುಪಡಿಸದೇ ಕೇವಲ 4 ಕೀಳು ದರ್ಜೆ ಶ್ರೀಗಂಧದ ಎಣ್ಣೆಯ ಕ್ಯಾನ್‌ಗಳನ್ನು ಅಮಾನತ್ತುಪಡಿಸಿರುತ್ತಾರೆ.
2. ದಿನಾಂಕ: 13.3.1997 ರಂದು ಜೀಪ್ ಸಂ. ಪಿವೈ-01-ಹೆಚ್-1065 ನ್ನು ಅಮಾನತ್ತುಪಡಿಸಿದ್ದರೂ ದಿನಾಂಕ; 16.3.1997 ರಂದು ಅಮಾನತ್ತುಪಡಿಸಿದಂತೆ ತೋರಿಸಿರುವುದಲ್ಲದೇ ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ 4 ಕ್ಯಾನ್‌ಗಳ ಶ್ರೀಗಂಧದ ಎಣ್ಣೆ ಹಾಗೂ ತೆಂಗಿನಕಾಯಿಗಳನ್ನು ಜಪ್ತಿಪಡಿಸಿರುವುದಿಲ್ಲ.

3. ಜಪ್ತಿಪಡಿಸಿದ ಸುಮಾರು 23 ಲಕ್ಷ ರೂ ಮೌಲ್ಯದ ಶ್ರೀಗಂಧದ ಶುದ್ಧ ಎಣ್ಣೆಯನ್ನು ತನ್ನ ಸ್ವಾರ್ಥಕ್ಕಾಗಿ ಸರ್ಕಾರದ ಬೊಕ್ಕಸಕ್ಕೆ ವಂಚಿಸಿ ಬೇರೆಯವರಿಗೆ ಮಾರಾಟ ಮಾಡಿರುತ್ತಾರೆ.
4. ವಶಪಡಿಸಿಕೊಂಡಿದ್ದ 11,000 ತೆಂಗಿನ ಕಾಯಿಗಳನ್ನು ದಿನಾಂಕ: 25.3.1997 ರಂದು ಬೆಳಿಗ್ಗೆ 11.00 ಗಂಟೆಗೆ ವಿಧಿ ವಿಧಾನಗಳನ್ನು ಅನುಸರಿಸದೇ ಯಾವುದೋ ಸ್ವಾರ್ಥ ಉದ್ದೇಶಕ್ಕಾಗಿ ತರಾತುರಿಯಲ್ಲಿ ಬಹಿರಂಗ ಹರಾಜುಗೊಳಿಸಿರುತ್ತಾರೆ."

ಮೇಲ್ಕಂಡ ಆರೋಪಗಳಲ್ಲಿ 2ನೇ ಆರೋಪ ಬಿಟ್ಟು ಉಳಿದ 1,3 ಹಾಗೂ 4ನೇ ಆರೋಪಗಳು ನಿಸ್ಸಂದೇಹವಾಗಿ ಇಲಾಖಾ ವಿಚಾರಣೆಯಲ್ಲಿ ಸಾಬೀತಾದ್ದರಿಂದ, ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕ ರವರು ಮೇಲೆ (1) ರಲ್ಲಿ ಓದಲಾದ ಆದೇಶ ದಿನಾಂಕ: 12.4.2004 ರಲ್ಲಿ ಶ್ರೀ ಅಲ್ಲಾಭಕ್ಷರವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತಂದೇ ಪರಿಗಣಿಸಿ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಪರಿಷ್ಕರಣಾ ಮೇಲ್ಮನವಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಇದರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

1. "ಅಭಿಯೋಗ ಸಾಕ್ಷಿ: 2 ರ ಸಾಕ್ಷಿಯ ಆಧಾರದ ಮೇಲೆ ತನಗೆ ಶಿಕ್ಷೆ ವಿಧಿಸಲಾಗಿದೆ. ದಿನಾಂಕ: 13.3.1997 ರಂದೇ ಲಾರಿಯನ್ನು ವಶಪಡಿಸಿಕೊಂಡಿರುವುದಾಗಿ ತಿಳಿಸಿರುವುದು ಹಾಗೂ 4 ವರ್ಷಗಳವರೆಗೆ ಯಾವುದೇ ಅಧಿಕಾರಿಗೂ ಅಕ್ರಮದ ಬಗ್ಗೆ ಮಾಹಿತಿ ನೀಡಿಲ್ಲದಿರುವುದು ಈತನ ಗೌಪ್ಯ ನಂಬಲರ್ಹವಲ್ಲವೆಂದು ವಾದಿಸಿರುತ್ತಾರೆ.
2. ಅಭಿಯೋಗ ಸಾಕ್ಷಿ 2: ದಿನಾಂಕ: 13.3.1997 ರ ರಾತ್ರಿ 7.30 ಗಂಟೆಯಲ್ಲಿ ಲಾರಿಯನ್ನು ಹಿಡಿದಾಗ ಅದರಲ್ಲಿ ಗಂಧದ ಎಣ್ಣೆ ವಾಸನೆ ಬರುತ್ತಿದ್ದುದನ್ನು ಮಾತ್ರ ತಿಳಿಸಿದ್ದು ಶ್ರೀಗಂಧದ ಎಣ್ಣೆ ಇರುವ ಬಗ್ಗೆ ಸಾಕ್ಷ್ಯ ನುಡಿದಿಲ್ಲ.
3. ಅಭಿಯೋಗ ಸಾಕ್ಷಿ5: ಲಾರಿಯನ್ನು ಜಪ್ತಿ ಮಾಡಿರುವ ಬಗ್ಗೆ ತಿಳಿಸಿದ್ದು, ಎಣ್ಣೆ ಕ್ಯಾನ್ ಇದ್ದ ಬಗ್ಗೆ ತಿಳಿಸಿಲ್ಲ.
4. ಅಭಿಯೋಗ ಸಾಕ್ಷಿ 7: ಪ್ರತಿಕೂಲ ಸಾಕ್ಷ್ಯ ಹೇಳಿದ್ದರೂ ಇಲಾಖಾ ವಿಚಾರಣೆ ಅಧಿಕಾರಿ ಇವರನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಿಲ್ಲ.
5. ಅಭಿಯೋಗ ಸಾಕ್ಷಿ 8: ರವರು ದಿನಾಂಕ: 15.3.1997 ರಂದು ಬೆಳಿಗ್ಗೆ 9.30 ಗಂಟೆಗೆ ತನಿಖೆ ಮಾಡಿದ್ದು ಆ ಸಮಯದಲ್ಲಿ ತೆಂಗಿನಕಾಯಿ ಮತ್ತು 4 ಕ್ಯಾನ್ ಕಂಡು ಬಂದಿದ್ದು ಅದನ್ನು ಅಧಿಕೃತವಾಗಿ ವಶಪಡಿಸಿಕೊಳ್ಳಲಾಗಿದೆ ಎಂದು ನುಡಿದಿರುವುದರಿಂದ ಇವರನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಬೇಕಾಗಿತ್ತು.
6. ಪ್ರಕರಣಕ್ಕೆ ಸಂಬಂಧಿಸಿದಂತೆ ನ್ಯಾಯಾಲಯಕ್ಕೆ ವರದಿ ಸಲ್ಲಿಸುವ ಮೊದಲು ಮೇಲಾಧಿಕಾರಿಗಳು ಪರಿಶೀಲನೆ ಮಾಡಿರುತ್ತಾರೆ ಆಗ ನ್ಯೂನತೆಗಳನ್ನು ಎತ್ತಿ ಹಿಡಿದಿಲ್ಲ.
7. ತಾನು ಗಂಧದ ಎಣ್ಣೆಯನ್ನು ಮಾರಿದ್ದರೇ ಆ ಬಗ್ಗೆ ಕ್ರಿಮಿನಲ್ ಮೊಕದ್ದಮೆ ದಾಖಲಾಗಬೇಕಾಗಿತ್ತು. ತಾನೇ ವಿಲೇ ಮಾಡಿದೆ ಎಂಬ ಬಗ್ಗೆ ಯಾವುದೇ ಸಾಕ್ಷ್ಯಾಧಾರವಿಲ್ಲ.
8. ಅಭಿಯೋಗ ಸಾಕ್ಷಿ 2 ರವರು 25 ಟನ್ ಗಂಧದ ಎಣ್ಣೆಯನ್ನು ರಾಬರ್ಟ್‌ಸನ್‌ಪೇಟೆ ಪೊಲೀಸ್ ಇನ್ಸ್‌ಪೆಕ್ಟರ್ ಶ್ರೀ ವಿವೇಕಾನಂದರವರ ಮನೆಗೆ ತೆಗೆದುಕೊಂಡು ಹೋಗಿರುವುದಾಗಿ ತಿಳಿಸಿದ್ದರೂ ಅವರನ್ನು ಇಲಾಖಾ ವಿಚಾರಣೆಯಲ್ಲಿ ಸಾಕ್ಷಿಯಾಗಿ ಪರಿಗಣಿಸಿಲ್ಲ.
9. 11,000 ತೆಂಗಿನಕಾಯಿಗಳನ್ನು ನಿಯಮಾನುಸಾರ ಹರಾಜು ಹಾಕಿ ಹಣವನ್ನು ಬ್ಯಾಂಕಿಗೆ ಕಟ್ಟಿರುತ್ತೇನೆ. ಇದರಲ್ಲಿ ಲೋಪದೋಷಗಳಿಲ್ಲ.
10. ಅಭಿಯೋಗ ಸಾಕ್ಷಿ 1: ರವರ ಹೇಳಿಕೆಯ ಆಧಾರದ ಮೇಲೆ ತೆಂಗಿನಕಾಯಿ ಮಾರಲಾಗಿದೆ ಎಂಬ ಅಭಿಪ್ರಾಯಕ್ಕೆ ಬರಲಾಗಿದೆ. ಉಳಿದ ಎಲ್ಲಾ ಅಭಿಯೋಗ ಸಾಕ್ಷಿಗಳೂ ಹರಾಜು ಮಾಡಿರುವುದಾಗಿ ತಿಳಿಸಿರುತ್ತಾರೆ. ಆದ್ದರಿಂದ ಅಭಿಯೋಗ ಸಾಕ್ಷಿ 1 ಸಾಕ್ಷ್ಯ ನಂಬಲರ್ಹವಲ್ಲ.
11. ಇಲಾಖಾ ವಿಚಾರಣೆಗೆ ಮೊದಲು ಪೂರ್ವಭಾವಿ ಇಲಾಖಾ ವಿಚಾರಣೆ ನಡೆಸಿರುವುದಿಲ್ಲ.
12. ಪ್ರಭಾರ ಡಿ.ಎಸ್.ಪಿ. ಇಲಾಖಾ ವಿಚಾರಣೆಯನ್ನು ಅಂತಿಮಗೊಳಿಸಿರುವುದು ನಿಯಮಬದ್ಧವಲ್ಲ."

ಅರ್ಜಿದಾರರು ಮಂಡಿಸಿರುವ ವಾದ ಹಾಗೂ ವಿಚಾರಣಾ ವರದಿ ಮತ್ತಿತರ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಲೋಕಾಯುಕ್ತರು ನೀಡಿದ ವರದಿಯ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿಗಳನ್ವಯ ವಿಚಾರಣೆಯನ್ನು ನಡೆಸಿದ್ದು, ಸದರಿ ವಿಚಾರಣೆಯಲ್ಲಿ 1, 3 ಹಾಗೂ 4ನೇ ಆರೋಪಗಳು ಸಾಬೀತಾಗಿದ್ದುದರ ಹಿನ್ನೆಲೆಯಲ್ಲಿ ಶಿಕ್ಷೆಯನ್ನು ವಿಧಿಸಲಾಗಿದೆ. ಅರ್ಜಿದಾರರ ತಮ್ಮ ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿ ನಮೂದಿಸಿರುವ ವಾದಾಂಶಗಳನ್ನು ಒಪ್ಪಲು ಯಾವುದೇ ಸಕಾರಣಗಳಿರುವುದಿಲ್ಲ. ಇವರಿಗೆ ವಿಧಿಸಿರುವ ಶಿಕ್ಷೆಯನ್ನು ಆರೋಪಕ್ಕೆ ಪೂರಕವಾಗಿದ್ದು ಇದರಲ್ಲಿ ಸರ್ಕಾರ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇಲ್ಲವೆಂದು ಪರಿಗಣಿಸಿ, ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಲು ಅಥವಾ ಮಾರ್ಪಡಿಸಲು ಯಾವುದೇ ಸಮರ್ಥನೆ ಇಲ್ಲವೆಂದು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 89 ಪೊಸಿಆ 2004, ಬೆಂಗಳೂರು, ದಿನಾಂಕ: 15ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಅಲ್ಲಾಭಕ್ಷ್, ಮಾಜಿ ಪೊಲೀಸ್ ಇನ್ಸ್‌ಪೆಕ್ಟರ್, ಕೆ.ಜಿ.ಎಫ್. ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 476

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಸಚಿವಾಲಯ

**ವಿಷಯ:** 2004-06ನೇ ಸಾಲಿನ ಪತ್ರಿಕಾ ಮಾನ್ಯತಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ವಾಪ್ರಯು 1 ವಾಪ್ರಪ 2002, ದಿನಾಂಕ: 21.9.2002.

2) ಆಯುಕ್ತರು, ವಾರ್ತಾ ಇಲಾಖೆ, ಇವರ ಪತ್ರ ಸಂಖ್ಯೆ: ವಾಇ/ಸುಮಪ/ಪಮಾಕ/2004-05/15006, ದಿನಾಂಕ: 19.3.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1) ರಲ್ಲಿ ಕರ್ನಾಟಕ ಪತ್ರಿಕಾ ಮಾನ್ಯತೆ ನಿಯಮಗಳು, ನಿಯಮ 1994 ಹಾಗೂ ಕರ್ನಾಟಕ ಪತ್ರಿಕಾ ಮಾನ್ಯತಾ ತಿದ್ದುಪಡಿ ನಿಯಮಗಳು, 1997ರ ಅನ್ವಯ ಪತ್ರಿಕಾ ಮಾನ್ಯತಾ ಸಮಿತಿಯನ್ನು ಪುನರ್‌ರಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಆಯುಕ್ತರು, ವಾರ್ತಾ ಇಲಾಖೆ, ಇವರು 2004-06ನೇ ಸಾಲಿಗೆ ರಾಜ್ಯ ಪತ್ರಿಕಾ ಮಾನ್ಯತಾ ಸಮಿತಿಯನ್ನು ಪುನರ್‌ರಚಿಸಲು ಆದೇಶ ಹೊರಡಿಸಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಪ್ರಯು:37:ವಾಪ್ರಪ:2005, ಬೆಂಗಳೂರು, ದಿನಾಂಕ: 28ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ 2004-06ನೇ ಸಾಲಿನ ಪತ್ರಿಕಾ ಮಾನ್ಯತಾ ಸಮಿತಿಯನ್ನು ಪುನರ್ ರಚಿಸಿ, ಈ ಕೆಳಕಂಡ ಸದಸ್ಯರನ್ನು ನೇಮಕ ಮಾಡಲಾಗಿದೆ.

| | | |
|---|---|---|
| 1 | ಆಯುಕ್ತರು / ನಿರ್ದೇಶಕರು, ವಾರ್ತಾ ಇಲಾಖೆ | ಅಧ್ಯಕ್ಷರು |
| | **ಅಖಿಲ ಭಾರತ ಪತ್ರಿಕಾ ಸಂಪಾದಕರ ಸಮ್ಮೇಳನದ ಪ್ರತಿನಿಧಿಗಳು** | |
| 1 | ಶ್ರೀ ರಾಜಶೇಖರ್ ಕೋಟಿ, ಸಂಪಾದಕರು, ಆಂದೋಳನ ಪತ್ರಿಕೆ, 777, ರಾಮಾನುಜ ರಸ್ತೆ, ಮೈಸೂರು | ಸದಸ್ಯರು |
| 2 | ಶ್ರೀ ಜಿ. ರಾಜೇಂದ್ರ, ಸಂಪಾದಕರು, "ಶಕ್ತಿ", ಇಂಡಸ್ಟ್ರಿಯಲ್ ಎಸ್ಟೇಟ್, ಮಡಿಕೇರಿ | ಸದಸ್ಯರು |
| | **ಕರ್ನಾಟಕ ರಾಜ್ಯ ಜಿಲ್ಲಾ ಪತ್ರಿಕಾ ಸಂಪಾದಕರ ಸಂಘದ ಪ್ರತಿನಿಧಿಗಳು:** | |
| 1 | ಶ್ರೀ ಕೆ. ಪ್ರಹ್ಲಾದರಾವ್, ಸಂಪಾದಕರು, ಕೋಲಾರ ಪತ್ರಿಕೆ ಕೋಲಾರ | ಸದಸ್ಯರು |
| 2 | ಶ್ರೀ ಆರ್.ಪಿ. ವೆಂಕಟೇಶ ಮೂರ್ತಿ, ಸಂಪಾದಕರು, ಜನತಾ ಮಾಧ್ಯಮ, ಹಾಸನ | ಸದಸ್ಯರು |
| | **ಕರ್ನಾಟಕ ಕಾರ್ಯನಿರತ ಪತ್ರಕರ್ತರ ಸಂಘದ ಪ್ರತಿನಿಧಿಗಳು** | |
| 1 | ಶ್ರೀ ಕೆ. ಆನಂದ ಶೆಟ್ಟಿ, ಮುಖ್ಯ ವರದಿಗಾರರು, ಹೊಸದಿಗಂತ, ಮಂಗಳೂರು | ಸದಸ್ಯರು |
| 2 | ಶ್ರೀ ದಿನೇಶ್ ಪಟವರ್ಧನ್, ವರದಿಗಾರರು, ಉದಯ ಟಿ.ವಿ., ಮಲ್ಲಂದೂರ್ ರಸ್ತೆ, ಚಿಕ್ಕಮಗಳೂರು | ಸದಸ್ಯರು |
| 3 | ಶ್ರೀಮತಿ ನಾಗಲಕ್ಷ್ಮಿ ಬಾಯಿ, ಸಂಪಾದಕರು, ಕನ್ನಡ ಸುದ್ದಿ ಸಂಸ್ಥೆ, 78: 14ನೇ ಅಡ್ಡರಸ್ತೆ, ಈಜುಕೊಳ ಬಡಾವಣೆ, ಮಲ್ಲೇಶ್ವರಂ, ಬೆಂಗಳೂರು | ಸದಸ್ಯರು |
| 4 | ಶ್ರೀ ಅಶೋಕ ಪಾಟೀಲ್, ಛಾಯಾಗ್ರಾಹಕರು, ದಿ ಹಿಂದೂ, ಗುಲ್ಬರ್ಗಾ | ಸದಸ್ಯರು |
| 5 | ಶ್ರೀ ರಮೇಶ ಸಿಂಧಗಿ, ವರದಿಗಾರರು, ಸಂಯುಕ್ತ ಕರ್ನಾಟಕ, ಅಥಣಿ, ಬೆಳಗಾವಿ ಜಿಲ್ಲೆ | ಸದಸ್ಯರು |
| | **ಬೆಂಗಳೂರು ವರದಿಗಾರರ ಕೂಟ** | |
| 1 | ಶ್ರೀ ಎಸ್.ಆರ್. ವೆಂಕಟೇಶ್ ಪ್ರಸಾದ್, ಮುಖ್ಯ ವರದಿಗಾರರು, ಉದಯ ಟಿ.ವಿ., ವಸಂತ ನಗರ, ಬೆಂಗಳೂರು | ಸದಸ್ಯರು |
| 2 | ಶ್ರೀ ಆರ್.ಹೆಚ್. ನಟರಾಜ್, ಹಿರಿಯ ವರದಿಗಾರರು, ಈ ಟಿವಿ ಕನ್ನಡ, ಮಾಧವ ನಗರ, ಬೆಂಗಳೂರು | ಸದಸ್ಯರು |
| 3 | ಶ್ರೀ ಪಿ. ಓಮೆನ್ ಜಾನ್, ಹಿರಿಯ ವರದಿಗಾರರು, ಡೆಕ್ಕನ್ ಹೆರಾಲ್ಡ್, ಮಹಾತ್ಮ ಗಾಂಧಿ ರಸ್ತೆ, ಬೆಂಗಳೂರು | ಸದಸ್ಯರು |
| 4 | ಶ್ರೀಮತಿ ಶಾಂತಲಾ ಧರ್ಮರಾಜ್, ಹಿರಿಯ ವರದಿಗಾರರು, ಸಂಯುಕ್ತ ಕರ್ನಾಟಕ, ಫೀಲ್ಡ್ ಮಾರ್ಷಲ್ ಕಾರ್ಯಪ್ಪ ರಸ್ತೆ, ಬೆಂಗಳೂರು | ಸದಸ್ಯರು |
| 5 | ಶ್ರೀ ಮುನೀರ್ ಅಹಮದ್, ಮುಖ್ಯ ವರದಿಗಾರರು, ಡೈಲಿ ಸಾಲಾರ್, ಡಾ: ಎಂ.ಹೆಚ್. ಮರೀಗೌಡ ರಸ್ತೆ, ಬೆಂಗಳೂರು | ಸದಸ್ಯರು |
| | **ಸರ್ಕಾರದ ವತಿಯಿಂದ ನಾಮ ನಿರ್ದೇಶನಗೊಂಡವರು:** | |
| 1 | ಶ್ರೀ ಎನ್. ನಂಜುಂಡೇಗೌಡ, ಉದಯವಾಣಿ, ಹಾಸನ | ಸದಸ್ಯರು |
| 2 | ಶ್ರೀ ಮಳಲಿ ನಟರಾಜ್, ಸಂಪಾದಕರು, ಬೆಂಗಳೂರು ಸಂಜೆ ಹಾಗೂ ಮೈಸೂರು ದಿಗಂತ, ಮೈಸೂರು | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 481

**ಎಸ್. ಸೀತಮ್ಮ**

ಅಧೀನ ಕಾರ್ಯದರ್ಶಿಗಳು,

ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಡಿ.ಎನ್. ಪಾಪಣ್ಣ, ನಿವೃತ್ತ ಪಿಎಸ್‌ಐ, ಚಿಕ್ಕಮಗಳೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಚಿಕ್ಕಮಗಳೂರು ಜಿಲ್ಲೆ ರವರ ಆದೇಶ ಸಂಖ್ಯೆ: ಪಿಆರ್:67:2001, ದಿನಾಂಕ: 25.9.2001.
2) ಅರ್ಜಿದಾರರ ಮನವಿ ದಿನಾಂಕ: 20.8.2002.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಸಿಬಿ5:154:1996-97, ದಿನಾಂಕ: 23.6.2003.

**ಪ್ರಸ್ತಾವನೆ:**

ಶ್ರೀ ಡಿ.ಎನ್. ಪಾಪಣ್ಣ, ಪಿಎಸ್ಐ (ನಿವೃತ್ತ) ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದಿನಾಂಕ: 18.6.2001 ರಂದು ರಾತ್ರಿ ನಗರ ಗಸ್ತು ಕರ್ತವ್ಯ ನಿರ್ವಹಿಸಬೇಕಾಗಿದ್ದು ಮನೆಯಲ್ಲಿ ಮಲಗಿ ಕರ್ತವ್ಯ ನಿರ್ಲಕ್ಷತೆ ಎಸಗಿದ ಆಪಾದನೆಯ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರ ನಿಯಮ 7 ರಡಿ ಶಿಸ್ತು ಕ್ರಮ ಕೈಗೊಳ್ಳಲಾಗಿದೆ.

ಅರ್ಜಿದಾರರ ಸಮಜಾಯಿಷಿಯನೊನ್ನಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮವಾಗಿ ಮುಂದೂಡಿ ಆದೇಶ ಹೊರಡಿಸಿದ್ದು, ಈ ಆದೇಶದ ವಿರುದ್ಧ ಸರ್ಕಾರಕ್ಕೆ ನೇರವಾಗಿ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆ ದಿನ ಕೆಲಸದ ಒತ್ತಡ ಜಾಸ್ತಿಯಾಗಿದ್ದು, ರಕ್ತದ ಒತ್ತಡ ಉಂಟಾಗಿದ್ದರಿಂದ ತನಗೆ ವಿಶ್ರಾಂತಿಯ ಅಗತ್ಯವಿತ್ತು. ಆದ್ದರಿಂದ ಕೆಳಗಿನ ಸಿಬ್ಬಂದಿಗೆ ತಿಳುವಳಿಕೆ ನೀಡಿ ಮನೆಯಲ್ಲಿ ಮಲಗಿದ್ದೆ ಎಂದು ವಾದಿಸಿರುತ್ತಾರೆ. ಆರೋಪವನ್ನು ಅರ್ಜಿದಾರರೇ ಒಪ್ಪಿಕೊಂಡಿರುವುದರಿಂದ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸಬಹುದಾದ ಅಂಶಗಳಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 230 ಪೊಸಿಅ 2002, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ, 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಎನ್. ಪಾಪಣ್ಣ, ಪಿಎಸ್ಐ, ಚಿಕ್ಕಮಗಳೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 501

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಕಾನೂನು ಸಚಿವಾಲಯ

**ವಿಷಯ:** ಧಾರವಾಡ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿ ಮುಂದುವರಿಕೆ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 236 ಎಲ್ಎಸಿ 2002, ದಿನಾಂಕ: 9.4.2003.
2) ಸರ್ಕಾರಿ ಆದೇಶ ಸಂಖ್ಯೆ: ಲಾ 249 ಎಲ್ಎಸಿ 2002, ದಿನಾಂಕ: 17.4.2003.
3) ಸರ್ಕಾರಿ ಆದೇಶ ಸಂಖ್ಯೆ: ಲಾ 235 ಎಲ್ಎಸಿ 2003, ದಿನಾಂಕ: 22.3.2003.
4) ಸರ್ಕಾರಿ ಆದೇಶ ಸಂಖ್ಯೆ: ಲಾ 248 ಎಲ್ಎಸಿ 2002, ದಿನಾಂಕ: 16.4.2003.
5) ಸರ್ಕಾರಿ ಆದೇಶ ಸಂಖ್ಯೆ: ಲಾ 21 ಎಲ್ಎಸಿ 2004, ದಿನಾಂಕ: 7.8.2004.
6) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408(9) 2004, ದಿನಾಂಕ: 12.1.2003.

**ಪ್ರಸ್ತಾವನೆ:**

ಧಾರವಾಡ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳನ್ನು ಕ್ರಮವಾಗಿ ಮೇಲೆ ಓದಲಾದ 1 ರಿಂದ 5 ರ ಸರ್ಕಾರಿ ಆದೇಶಗಳಲ್ಲಿ ಮುಂದುವರೆಸಲು ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1. 3ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಧಾರವಾಡ
2. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಕಲಘಟಗಿ
3. 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಧಾರವಾಡ
4. 3ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಹುಬ್ಬಳ್ಳಿ
5. 3ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಧಾರವಾಡ
6. 4ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಹುಬ್ಬಳ್ಳಿ

ಸದರಿ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (6) ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 41 ಎಲ್ಎಸಿ 2005, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ತಿಳಿಸಿರುವ ಧಾರವಾಡ ಜಿಲ್ಲೆಯ ಆರು ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 502

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಶ್ರೀ ಎಸ್.ಬಿ. ಶಿರಾಳಿ, ನೋಟರಿ, ಸಿರಸಿ ಇವರ ಹೆಸರನ್ನು ನೋಟರಿ ರಿಜಿಸ್ಟರ್ ನಿಂದ ತೆಗೆದು ಹಾಕುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಲಾ 197 ಎಲ್‌ಸಿಎಲ್ 97, ದಿನಾಂಕ: 30.5.98.
2) ದಿನಾಂಕ: 23.7.2003ರ ವಕೀಲರ ಸಂಘ, ಸಿರ್ಸಿ ಇವರ ಮನವಿ.

3) ಸರ್ಕಾರಿ ಪತ್ರ ಸಂಖ್ಯೆ: ಲಾ 97 ಎಲ್‌ಸಿಎಲ್ 03, ದಿನಾಂಕ: 8.8.2003.

4) ದಿನಾಂಕ: 31.3.2004ರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ ಕಾರವಾರ ಇವರ ಪತ್ರ.

**ಪ್ರಸ್ತಾವನೆ:**

ಶ್ರೀ ಎಸ್.ಬಿ. ಶಿರಾಳಿ, ನೋಟರಿ ಸಿರಸಿ ಇವರನ್ನು ಮೇಲೆ ಓದಲಾದ (1)ರ ಆದೇಶ ಸಂಖ್ಯೆ: ಲಾ 195 ಎಲ್‌ಸಿಎಲ್ 1997, ದಿನಾಂಕ: 30.5.98 ರಂದು ಸಿರಸಿ ಕಂದಾಯ ತಾಲ್ಲೂಕಿಗೆ ನೋಟರಿಯಾಗಿ ನೇಮಕ ಮಾಡಲಾಗಿತ್ತು. ಮೇಲೆ ಓದಲಾದ ಕ್ರಮಾಂಕ (2) ದಿನಾಂಕ: 23.7.03 ರಲ್ಲಿ ಸದರಿ ನೋಟರಿಯವರು ತುಂಬಾ ವಯೋವೃದ್ದರಿದ್ದು ಅನಾರೋಗ್ಯದಿಂದಿರುವುದರಿಂದ ನೋಟರಿ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸುತ್ತಿಲ್ಲವೆಂದು ಬೇರೆಯವರನ್ನು ನೇಮಿಸಬೇಕೆಂದು ಸರ್ಕಾರವನ್ನು ಹಾಗೂ ತದನಂತರ ಮಾನ್ಯ ಕಾನೂನು ಸಚಿವರನ್ನು ಕೋರಿದ್ದಾರೆ.

ಮೇಲೆ ಓದಲಾದ ಕ್ರಮಾಂಕ (3)ರ ದಿನಾಂಕ: 8.8.03 ರ ಸರ್ಕಾರಿ ಪತ್ರದಲ್ಲಿ ಈ ಬಗ್ಗೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಉತ್ತರ ಕನ್ನಡ ಇವರ ಅಭಿಪ್ರಾಯ ಕೋರಲಾಯಿತು. ಮೇಲೆ ಓದಲಾದ (4) ದಿನಾಂಕ: 31.3.2004ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ ಇವರು ಶ್ರೀ ಎಸ್.ಬಿ. ಶಿರಾಳಿ, ನೋಟರಿ ಇವರು ತಮಗೆ ಆಪರೇಶನ್ ಆಗಿದ್ದು ವಯಸ್ಸಾದ್ದರಿಂದ ನೋಟರಿ ಕರ್ತವ್ಯ ನಿರ್ವಹಿಸಲು ಸಾಧ್ಯವಾಗುವುದಿಲ್ಲ. ಆದ ಕಾರಣ ಬೇರೆಯವರನ್ನು ನೋಟರಿಯಾಗಿ ನೇಮಿಸಬೇಕೆಂದು ತಮ್ಮನ್ನು ಕೋರಿರುವುದಾಗಿ ತಿಳಿಸಿರುತ್ತಾರೆ. ಆದ್ದರಿಂದ ಸರ್ಕಾರವು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 97 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಎಸ್.ಬಿ. ಶಿರಾಳಿ ನೋಟರಿ, ಸಿರ್ಸಿ ಇವರ ಹೆಸರನ್ನು ನೋಟರಿ ನಿಯಮ 13(12) (ಬಿ) (1) ರನ್ವಯ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 503

**ಸಿ.ಎ. ಬಾಬುರವೀಂದ್ರನಾಥ್ ಪಟೇಲ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಮಂಡ್ಯ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 21 ಎಲ್‌ಎಸಿ 2004, ದಿನಾಂಕ: 7.8.2004.

2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408 (15) 2004, ದಿನಾಂಕ: 8.2.2005.

**ಪ್ರಸ್ತಾವನೆ:**

ಮಂಡ್ಯ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಮಂಡ್ಯ
2. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಮದ್ದೂರು
3. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಪಾಂಡವಪುರ
4. ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ಫಸ್ಟ್‌ಕ್ಲಾಸ್, ಮಂಡ್ಯ

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 62 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ತಿಳಿಸಿರುವ ಮಂಡ್ಯ ಜಿಲ್ಲೆಯ ನಾಲ್ಕು ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಕ್ರ.ಸಂ. 1 ರಿಂದ 3 ರ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಕ್ರ.ಸಂ. 4 ರ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-108-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 504

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಮೈಸೂರು ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004, ದಿನಾಂಕ: 18.5.2004.

2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408 (16) 2004, ದಿನಾಂಕ: 22.1.2005.

**ಪ್ರಸ್ತಾವನೆ:**

ಮೈಸೂರು ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1. 2ನೇ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶರು, ಮೈಸೂರು
2. 3ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯವನ್ನು, ಮೈಸೂರು (ಪ್ರಿವೆಂಷನ್ ಆಫ್ ಕರಪ್ಷನ್ ಆಕ್ಟ್‌ಗಾಗಿ)
3. 3ನೇ ಹೆಚ್ಚುವರಿ 1ನೇ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮೈಸೂರು

4. 4ನೇ ಹೆಚ್ಚುವರಿ 1ನೇ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮೈಸೂರು
5. 5ನೇ ಹೆಚ್ಚುವರಿ 1ನೇ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮೈಸೂರು
6. ಜೆಎಂಎಫ್‌ಸಿ 3ನೇ ನ್ಯಾಯಾಲಯ, ಮೈಸೂರು
7. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ನಂಜನಗೂಡು
8. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಪಿರಿಯಾಪಟ್ಟಣ
9. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಹೆಗ್ಗಡದೇವನಕೋಟೆ

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 55 ಎಲ್ಎಸಿ 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ತಿಳಿಸಿರುವ ಮೈಸೂರು ಜಿಲ್ಲೆಯ ಒಂಭತ್ತು ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 505

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಬೆಂಗಳೂರಿನಲ್ಲಿರುವ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 26 ಎಲ್ಎಸಿ 2004, ದಿನಾಂಕ: 26.3.2004.
2) ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್ಎಸಿ 2004, ದಿನಾಂಕ: 18.5.2004.
3) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408 (1) 2004, ದಿನಾಂಕ: 10.1.2005.

**ಪ್ರಸ್ತಾವನೆ:**

ಬೆಂಗಳೂರಿನಲ್ಲಿರುವ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1) ಮತ್ತು (2) ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1. 21ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು.
2. 22ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ ಬೆಂಗಳೂರು (ಮಹಿಳೆಯರ ಮೇಲಿನ ದೌರ್ಜನ್ಯಗಳಿಗಾಗಿ)
3. 23ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ (ಪ್ರಿವೆಂಷನ್ ಆಫ್ ಕರಪ್ಷನ್ ಆ್ಯಕ್ಟ್‌ಗಾಗಿ)
4. 24 ರಿಂದ 31ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು
5. 33ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು (ಎಸ್.ಡಿ.ಪಿ.ಎನ್. ಪ್ರಕರಣಗಳ ವಿಚಾರಣೆಗಾಗಿ)
6. 5ನೇ ಹೆಚ್ಚುವರಿ ಸಣ್ಣ ವ್ಯಾಜ್ಯಗಳ ನ್ಯಾಯಾಲಯಗಳು, ಬೆಂಗಳೂರು
7. ಆರ್ಥಿಕ ಅಪರಾಧಗಳಿಗಾಗಿ ವಿಶೇಷ ನ್ಯಾಯಾಲಯ, ಬೆಂಗಳೂರು

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 36 ಎಲ್ಎಸಿ 2005, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ತಿಳಿಸಿರುವ ಬೆಂಗಳೂರಿನಲ್ಲಿರುವ ಏಳು ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಕ್ರಮ ಸಂಖ್ಯೆ: (6)ನ್ನು ಹೊರತುಪಡಿಸಿ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಕ್ರಮ ಸಂಖ್ಯೆ:(6)ರ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-106-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 506

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಉಡುಪಿ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್ಎಸಿ 2004, ದಿನಾಂಕ: 18.5.2004.
2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408 (21) 2004, ದಿನಾಂಕ: 8.2.2005.

**ಪ್ರಸ್ತಾವನೆ:**

ಉಡುಪಿ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಉಡುಪಿ
2. 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಕಾರ್ಕಳ

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 59 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

1. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಉಡುಪಿ
2. 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಕಾರ್ಕಳ

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 507

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಬೆಂಗಳೂರಿನಲ್ಲಿರುವ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004, ದಿನಾಂಕ: 18.5.2004.

2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408 (1) 2004, ದಿನಾಂಕ: 23.2.2005.

**ಪ್ರಸ್ತಾವನೆ:**

ಬೆಂಗಳೂರಿನಲ್ಲಿರುವ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1. 12 ರಿಂದ 16 ರವರೆಗಿನ ಹೆಚ್ಚುವರಿ ಮುಖ್ಯ ಮೆಟ್ರೋಪಾಲಿಟನ್, ಮ್ಯಾಜಿಸ್ಟ್ರೇಟ್ ನ್ಯಾಯಾಲಯಗಳು, ಬೆಂಗಳೂರು.
2. 7 ರಿಂದ 11 ರವರೆಗಿನ ಹೆಚ್ಚುವರಿ ಮುಖ್ಯ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯಗಳು, ಬೆಂಗಳೂರು
3. ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್, ಟ್ರಾಫಿಕ್ ಕೋರ್ಟ್-3, ಬೆಂಗಳೂರು
4. 4ನೇ ಹೆಚ್ಚುವರಿ ಮುಖ್ಯ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯ, ಬೆಂಗಳೂರು
5. 5ನೇ ಹೆಚ್ಚುವರಿ ಮುಖ್ಯ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯ, ಬೆಂಗಳೂರು
6. 6ನೇ ಹೆಚ್ಚುವರಿ ಮುಖ್ಯ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯ, ಬೆಂಗಳೂರು
7. 3ನೇ ಹೆಚ್ಚುವರಿ ಮುಖ್ಯ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯ, ಬೆಂಗಳೂರು

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 65 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಪ್ರಸ್ತಾವನೆಯಲ್ಲಿ ತಿಳಿಸಿರುವ ಬೆಂಗಳೂರಿನಲ್ಲಿರುವ ಏಳು ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-108-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 508

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಬೆಂಗಳೂರಿನ ಕುಟುಂಬ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004, ದಿನಾಂಕ: 18.5.2004.

2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408 (16) 2004, ದಿನಾಂಕ: 22.1.2005.

**ಪ್ರಸ್ತಾವನೆ:**

ಬೆಂಗಳೂರಿನಲ್ಲಿರುವ ಈ ಕೆಳಕಂಡ ಕುಟುಂಬ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1. ಪ್ರಧಾನ ನ್ಯಾಯಾಧೀಶರು, ಕುಟುಂಬ ನ್ಯಾಯಾಲಯ, ಬೆಂಗಳೂರು
2. 1ನೇ ಹೆಚ್ಚುವರಿ ಪ್ರಧಾನ ನ್ಯಾಯಾಧೀಶರು, ಕುಟುಂಬ ನ್ಯಾಯಾಲಯ, ಬೆಂಗಳೂರು
3. 2ನೇ ಹೆಚ್ಚುವರಿ ಪ್ರಧಾನ ನ್ಯಾಯಾಧೀಶರು, ಕುಟುಂಬ ನ್ಯಾಯಾಲಯ, ಬೆಂಗಳೂರು

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 57 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ತಿಳಿಸಿರುವ ಬೆಂಗಳೂರಿನ ಮೂರು ಕುಟುಂಬ ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-117-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 509

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಹಾವೇರಿ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 24 ಎಲ್‌ಎಸಿ 2003, ದಿನಾಂಕ: 5.5.2003.
2) ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004, ದಿನಾಂಕ: 18.5.2004.
3) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408 (24) 2004, ದಿನಾಂಕ: 15.1.2005.

**ಪ್ರಸ್ತಾವನೆ:**

ಹಾವೇರಿ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1) ಮತ್ತು 2ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಶಿಗ್ಗಾಂವ್
2. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಬ್ಯಾಡಗಿ

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 58 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

1. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಶಿಗ್ಗಾಂವ್
2. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಬ್ಯಾಡಗಿ

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 510

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಸಿಜೆಎಂ, ಚಾಮರಾಜನಗರ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 116 ಎಲ್‌ಎಸಿ 2003, ದಿನಾಂಕ: 16.6.2003.
2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408 (27) 2004, ದಿನಾಂಕ: 10.2.2005.

**ಪ್ರಸ್ತಾವನೆ:**

ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಸಿಜೆಎಂ, ಚಾಮರಾಜನಗರ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 5.5.2005 ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯಕ್ಕೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 6.5.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 64 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಚಾಮರಾಜನಗರದ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಸಿಜೆಎಂ ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 6.5.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 511

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಕೋಲಾರ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004, ದಿನಾಂಕ: 18.5.2004.
2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408 (14) 2004, ದಿನಾಂಕ: 19.1.2005.

**ಪ್ರಸ್ತಾವನೆ:**

ಕೋಲಾರ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಗುಡಿಬಂಡೆ
2. 1ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 54 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಕೋಲಾರ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

1. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಗುಡಿಬಂಡೆ
2. 1ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 512

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಉತ್ತರ ಕನ್ನಡ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004, ದಿನಾಂಕ: 18.5.2004.
2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408 (20) 2004, ದಿನಾಂಕ: 8.2.2005.

**ಪ್ರಸ್ತಾವನೆ:**

ಉತ್ತರ ಕನ್ನಡ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಮುಂಡಗೋಡ್
2. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಕಾರವಾರ

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 60 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಉತ್ತರ ಕನ್ನಡ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

1. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಮುಂಡಗೋಡ್
2. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಕಾರವಾರ

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 513

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-1).

**ತಿದ್ದೋಲೆ**

**ಸಂಖ್ಯೆ: ಲಾ 121 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 93 ಎಲ್‌ಎಸಿ 2004, ದಿನಾಂಕ: 15.10.2004 ರ 6ನೇ ಸಾಲಿನಲ್ಲಿರುವ "3ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ" ಬದಲಾಗಿ "4ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬಿಜಾಪುರ" ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 514

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ಗಂಗಾವತಿ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004, ದಿನಾಂಕ: 10.5.2004

2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408(22) 2004, ದಿನಾಂಕ: 19.1.2005.

**ಪ್ರಸ್ತಾವನೆ:**

ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಗಂಗಾವತಿ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 31.3.2005 ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯಕ್ಕೆ ಮಂಜೂರಾದ ಪ್ರಿಸ್ಯೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 56 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಗಂಗಾವತಿ ನ್ಯಾಯಾಲಯದ ಪ್ರಿಸ್ಯೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 515

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಕಾನೂನು ಇಲಾಖೆ (ಆಡಳಿತ-1).

**ವಿಷಯ:** ತುಮಕೂರು ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004, ದಿನಾಂಕ: 18.5.2004.

2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408(19) 2004, ದಿನಾಂಕ: 18.2.2005.

**ಪ್ರಸ್ತಾವನೆ:**

ತುಮಕೂರು ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005 ಕ್ಕೆ ಪೂರ್ಣಗೊಳ್ಳಲಿದೆ.

1. 3ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ (4ನೇ ನ್ಯಾಯಾಲಯ) ತುಮಕೂರು
2. 1ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು
3. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ತಿಪಟೂರು
4. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ತುರುವೇಕೆರೆ
5. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಕೊರಟಗೆರೆ

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸ್ಯೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 63 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ತಿಳಿಸಿರುವ ತುಮಕೂರು ಜಿಲ್ಲೆಯ ಐದು ನ್ಯಾಯಾಲಯಗಳ ಪ್ರಿಸ್ಯೈಡಿಂಗ್ ಅಧಿಕಾರಿ ಮತ್ತು ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.6.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 516

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಕಾನೂನು ಇಲಾಖೆ (ಆಡಳಿತ-1).

**ವಿಷಯ:** ರಾಯಚೂರು ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 56 ಎಲ್ಎಸಿ 2003, ದಿನಾಂಕ: 7.6.2003.

2) ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್ಎಸಿ 2004, ದಿನಾಂಕ: 18.5.2004.

3 ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408(17) 2004, ದಿನಾಂಕ: 8.2.2005.

**ಪ್ರಸ್ತಾವನೆ:**

ರಾಯಚೂರು ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1) ಮತ್ತು (2) ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005 ಕ್ಕೆ ಪೂರ್ಣಗೊಳ್ಳಲಿದೆ.

1. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ರಾಯಚೂರು
2. ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಯಚೂರು
3. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಸಿಂಧನೂರು

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (3) ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 61 ಎಲ್ಎಸಿ 2005, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ತಿಳಿಸಿರುವ ರಾಯಚೂರು ಜಿಲ್ಲೆಯ ಮೂರು ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 517

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-1).

**ವಿಷಯ:** ಚಾಮರಾಜನಗರ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್ಎಸಿ 2004, ದಿನಾಂಕ: 18.5.2004.

2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ-2-408(27) 2004, ದಿನಾಂಕ: 10.2.2005.

**ಪ್ರಸ್ತಾವನೆ:**

ಚಾಮರಾಜನಗರ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005 ಕ್ಕೆ ಪೂರ್ಣಗೊಳ್ಳಲಿದೆ.

1. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಚಾಮರಾಜನಗರ
2. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಕೊಳ್ಳೇಗಾಲ
3. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಯಲಂದೂರು
4. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಗುಂಡ್ಲುಪೇಟೆ

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 53 ಎಲ್ಎಸಿ 2005, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ತಿಳಿಸಿರುವ ಚಾಮರಾಜನಗರ ಜಿಲ್ಲೆಯ ನಾಲ್ಕು ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 518

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-1).

**ಶಿಕ್ಷಣ ಸಚಿವಾಲಯ**

**ವಿಷಯ:** ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ: 4.4.2002 ರ ಸರ್ಕಾರದ ಆದೇಶ ಸಂಖ್ಯೆ: ಇಡಿ 08 ಎಸ್‌ಎಕ್ಸ್ಎಂ 02.

2) ಏಕ ಕಡತ ಪದ್ಧತಿಯಡಿ ಸ್ವೀಕೃತವಾದ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ರ ಕಡತದ ಸಂಖ್ಯೆ: ಆ8-345-ಪುಮಂಪ್ರ-5/2004-05.

**ಪ್ರಸ್ತಾವನೆ:**

1. ಮೇಲೆ ಓದಲಾದ (2) ರಲ್ಲಿನ ಕಡತದ ಕಂಡಿಕೆ 16 ರಲ್ಲಿ ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಇವರು ತಮ್ಮ ಅಭಿಪ್ರಾಯವನ್ನು ನೀಡಿ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಅಧಿನಿಯಮ 1966ರ ಸೆಕ್ಷನ್ 4 ರನ್ವಯ ಮಂಡಳಿಯ ಪುನರ್ ರಚನೆ ಬಗ್ಗೆ ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಗೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ (2) ರಲ್ಲಿನ ಕಡತದಲ್ಲಿನ ಕಂಡಿಕೆ 18 ರಲ್ಲಿ ಅವರ ಸಹಮತಿ ವ್ಯಕ್ತಪಡಿಸಿದ್ದಾರೆ.

2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಅಧ್ಯಕ್ಷರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು ಇವರ ಸದರಿ ಪ್ರಸ್ತಾವನೆಯನ್ನು ಸರ್ಕಾರ ಪರಿಗಣಿಸಿ, ಈ ಕೆಳಕಂಡ ಆದೇಶವನ್ನು ಈ ಮೂಲಕ ಹೊರಡಿಸಲು ನಿರ್ಣಯಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 04 ಎಸ್‌ಎಕ್ಸ್ಎಂ 2005, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2005**

3. ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯನ್ನು ಪುನರ್ ರಚಿಸಲು ಸರ್ಕಾರ ಈ ಮೂಲಕ ಆದೇಶಿಸಿದೆ.

| | | |
|---|---|---|
| 1 | ಅಧ್ಯಕ್ಷರು | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು |
| 2 | ಮಂಡಳಿಯ ಕಾರ್ಯಕಾರಿ, ಉಪಾಧ್ಯಕ್ಷರು | ನಿರ್ದೇಶಕರು (ಪರೀಕ್ಷೆಗಳು) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು |
| 3 | ಉಪಾಧ್ಯಕ್ಷರು | ಸಹ ನಿರ್ದೇಶಕರು (ಶಾಲಾ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತರ ಕಛೇರಿ, ಬೆಂಗಳೂರು |
| | **ಸದಸ್ಯರು:** | |
| 1 | ಸಾರ್ವಜನಿಕ ಶಿಕ್ಷಣ ಇಲಾಖೆಯ ಒಬ್ಬ ಉಪ ನಿರ್ದೇಶಕರು | ಶ್ರೀ ಹಫೀಜುಲ್ಲಾ ಷರೀಫ್, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ |
| 2 | ನಿರ್ದೇಶಕರುಗಳು:<br>ಅ) ಪದವಿ ಪೂರ್ವ ಶಿಕ್ಷಣ<br>ಆ) ವೃತ್ತಿ ಶಿಕ್ಷಣ<br>ಇ) ಆಯುಕ್ತರು / ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ<br>ಈ) ತಾಂತ್ರಿಕ ಶಿಕ್ಷಣ<br>ಉ) ಆಯುಕ್ತರು / ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ | |
| 3 | ವಿಶ್ವವಿದ್ಯಾನಿಲಯಗಳನ್ನು ಪ್ರತಿನಿಧಿಸುವ 4 ಪ್ರಾಧ್ಯಾಪಕರು | 1) ಡಾ: ಲಲಿತಮ್ಮ ಮೈಸೂರು ವಿಶ್ವವಿದ್ಯಾನಿಲಯ<br>2) ಡಾ: ತಳವಾರ್, ಬೆಂಗಳೂರು ವಿಶ್ವವಿದ್ಯಾನಿಲಯ<br>3) ಡಾ: ಕಾಶೀನಾಥ್, ಕರ್ನಾಟಕ ವಿಶ್ವವಿದ್ಯಾನಿಲಯ<br>4) ಡಾ: ಶಾಂತವೀರಪ್ಪ, ಕುವೆಂಪು ವಿಶ್ವವಿದ್ಯಾನಿಲಯ |
| 4 | ನಿರ್ದೇಶಕರು | ಡಿ.ಎಸ್.ಇ.ಆರ್.ಟಿ. ಬೆಂಗಳೂರು |
| | ಎ) ಪ್ರೌಢಶಾಲೆಗಳನ್ನು ಪ್ರತಿನಿಧಿಸುವವರು<br>ಬಿ) ಪ್ರೌಢಶಾಲಾ ಮುಖ್ಯಸ್ಥರು (ಇಬ್ಬರು) | 1) ಶ್ರೀ ಚಂದ್ರೇಗೌಡ, ಮುಖ್ಯ ಶಿಕ್ಷಕರು, ವಿದ್ಯಾರಣ್ಯ ಪ್ರೌಢಶಾಲೆ, ತುರುವೇಕೆರೆ, ತುಮಕೂರು ಜಿಲ್ಲೆ<br>2) ಶ್ರೀ ಪ್ರಕಾಶ್ ನಾಯಕ್, ಮುಖ್ಯೋಪಾಧ್ಯಾಯರು, ಕಾರವಾರ. |
| | ಸಹ ಶಿಕ್ಷಕರು | 1) ಶ್ರೀ ಮಸೂದ್ ಅಬ್ದುಲ್ ಖಾಲಿಕ್, ಸ.ಶಿ. ಸರ್ಕಾರಿ ಉರ್ದು ಪ್ರೌಢಶಾಲೆ, ಲಾಲ್‌ಗಿರಿ, ಗುಲ್ಬರ್ಗ (ಗುಲ್ಬರ್ಗ ವಿಭಾಗ)<br>2) ಶ್ರೀ ಅಶೋಕ್ ಕಾಮತ್, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ವಳಕಾಡು, ಉಡುಪಿ (ಮೈಸೂರು ವಿಭಾಗ) |
| | ಸಿ) ಬಿ.ಇಡಿ ಕಾಲೇಜಿನ ಪ್ರಾಂಶುಪಾಲರು | 1) ಶ್ರೀ ನರಸಿಂಹಮೂರ್ತಿ, ಪ್ರಾಂಶುಪಾಲರು, ಟ್ಯಾಗೂರ್ ಸ್ಮಾರಕ ಬಿ.ಇಡಿ ಕಾಲೇಜು, ರಾಯಚೂರು |
| | ಡಿ) ಶಿಕ್ಷಣ ತಜ್ಞರು | 1) ಡಾ: ಶಿವಾನಂದ, ನಿವೃತ್ತ ಇಲಾಖಾ ಮುಖ್ಯಸ್ಥರು, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು<br>2) ಶ್ರೀ ಸಂಪಂಗಿ, ನಿವೃತ್ತ ನಿರ್ದೇಶಕರು, ಬೆಂಗಳೂರು<br>3) ಶ್ರೀ ಎಂ.ಎಲ್. ದಖನಿ, ನಿವೃತ್ತ ಪ್ರಾಂಶುಪಾಲರು, ಸರ್ಕಾರಿ ಬಿ.ಇಡಿ. ಕಾಲೇಜು, ಬೆಳಗಾಂ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 519

**ಬಿ. ಹೆಚ್. ಪಡಸಲಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ.